# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | : | 339 |
| ಸದಸ್ಯರ ಹೆಸರು | : | ಶ್ರೀ ನರೇಂದ್ರ ಆರ್. (ಹನೂರು) |
| ಉತ್ತರಿಸುವ ದಿನಾಂಕಃ | : | 21-09-2020 |
| ಉತ್ತರಿಸುವ ಸಚಿವರು: | : | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ |

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಚಾಮರಾಜನಗರ ಜಿಲ್ಲೆ ಹನೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬಂಡಳ್ಳಿ ಮುಖ್ಯ ರಸ್ತೆಯಿಂದ ತೆಳ್ಳನೂರು ಗ್ರಾಮ ಸೇರುವ ರಸ್ತೆಯು ಸಂಪೂರ್ಣ ಹದಗೆಟ್ಟು ಸಾರ್ವಜನಿಕರ ಸಂಚಾರಕ್ಕೆ ತುಂಬಾ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಈ ರಸ್ತೆಯನ್ನು ಅಭಿವೃದ್ಧಿ ಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಚಾಮರಾಜನಗರ ಜಿಲ್ಲೆ ಹನೂರು ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬಂಡಳ್ಳಿ ಮುಖ್ಯ ರಸ್ತೆಯಿಂದ ತೆಳ್ಳನೂರು ಗ್ರಾಮ ಸೇರುವ ರಸ್ತೆಯ ಅಭಿವೃದ್ಧಿಗೆ (ಮತ್ತಿಪುರ ಕ್ರಾಸ್‌ನಿಂದ ಬಂಡಳ್ಳಿ ವರೆಗೆ ಕಿ.ಮೀ 16.50 ರಿಂದ 22.20 ಕಿ.ಮೀ.ವರೆಗೆ) ಅಂದಾಜು ಮೊತ್ತ ರೂ.6.00 ಕೋಟಿಗಳಿಗೆ 2016-17ನೇ ಸಾಲಿನ ಸಿ.ಆರ್.ಎಫ್. ಯೋಜನೆಯಡಿ ಜಾಬ್ ಸಂಖ್ಯೆ.ಸಿ.ಅರ್.ಎಫ್/16-17/1960, ದಿನಾಂಕ: 02.11.2016ರಡಿ ಮಂಜೂರಾಗಿದ್ದು, ಟೆಂಡರ್ ಸ್ವೀಕೃತಗೊಂಡಿದ್ದು, ಸದರಿ ಟೆಂಡರ್‌ನಲ್ಲಿ ಒಬ್ಬರೇ ಅರ್ಹ ಗುತ್ತಿಗೆದಾರರು ಭಾಗವಹಿಸಿದ್ದು, ಸದರಿ ಗುತ್ತಿಗೆದಾರರು ನಮೂದಿಸಿದ ಮೊತ್ತವು ಟೆಂಡರ್‌ಗಿಟ್ಟ ಮೊತ್ತಕ್ಕಿಂತ ಶೇಕಡ 18.85 ಅಧಿಕವಾಗಿರುವ ಕಾರಣ ಗುತ್ತಿಗೆದಾರರನ್ನು ಸಂಧಾನಕ್ಕೆ ಆಹ್ವಾನಿಸಲಾಗಿ, ಗುತ್ತಿಗೆದಾರರು ಸಂಧಾನಕ್ಕೆ ಹಾಜರಾಗದ ಕಾರಣ ಹಾಗೂ ಈ ಟೆಂಡರ್‌ನ ಊರ್ಜಿತಾವಧಿ ಮುಕ್ತಾಯಗೊಂಡಿರುವುದರಿಂದ ಸದರಿ ಟೆಂಡರನ್ನು ತಿರಸ್ಕರಿಸಲಾಗಿರುತ್ತದೆ.<br>2016-17ನೇ ಸಾಲಿನಲ್ಲಿ ಮಂಜೂರಾದ 567 ಸಿ.ಆರ್.ಎಫ್. ಕಾಮಗಾರಿಗಳ ಊರ್ಜಿತ ಅವಧಿ ಮುಕ್ತಾಯಗೊಂಡಿರುವುದರಿಂದ ಸದರಿ ಕಾಮಗಾರಿಗಳ ಊರ್ಜಿತ ಅವಧಿಯನ್ನು 24 ತಿಂಗಳುಗಳಿಂದ 36 ತಿಂಗಳುಗಳಿಗೆ Revalidate ಮಾಡುವಂತೆ ಕೇಂದ್ರ ಸರ್ಕಾರದ ರಸ್ತೆ ಸಾರಿಗೆ ಮತ್ತು ಹೆದ್ದಾರಿಗಳ ಮಂತ್ರಾಲಯಕ್ಕೆ ದಿನಾಂಕ:04.12.2019 ರಂದು ಪತ್ರ ಬರೆಯಲಾಗಿದೆ. |

ಲೋಇ 170 ಸಿಎನ್‌ಹೆಚ್ 2020(ಇ)

(ಗೋವಿಂದ ಕಾರಜೋಳ)
ಉಪ ಮುಖ್ಯಮಂತಿಯವರು,
ಲೋಕೋಪಯೋಗಿ ಮತ್ತು
ಸಮಾಜ ಕಲ್ಯಾಣ ಇಲಾಖೆ

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**7ನೇ ಅಧಿವೇಶನ**

| | | |
|---|---|---|
| **ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ** | : | **343** |
| **ಸದಸ್ಯರ ಹೆಸರು** | : | **ಶ್ರೀ ಸುರೇಶ್ ಗೌಡ (ನಾಗಮಂಗಲ)** |
| **ಉತ್ತರಿಸುವ ದಿನಾಂಕ** | : | **21-09-2020** |
| **ಉತ್ತರಿಸುವ ಸಚಿವರು** | : | **ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು)** |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2020-21ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯಿಂದ ಸಿ.ಎಂ.ಜಿ.ಆರ್.ವೈ. ಲೆಕ್ಕ ಶೀರ್ಷಿಕೆಯಡಿಯಲ್ಲಿ ನೀಡಿರುವ ಅನುದಾನವೆಷ್ಟು; (ವಿಧಾನಸಭಾ ಕ್ಷೇತ್ರವಾರು / ಕಾಮಗಾರಿಗಳವಾರು ಸಂಪೂರ್ಣ ವಿವರ ನೀಡುವುದು) | 2020-21ನೇ ಸಾಲಿಗೆ ಲೋಕೋಪಯೋಗಿ ಇಲಾಖೆಗೆ ಲೆಕ್ಕಶೀರ್ಷಿಕೆ 3054-04-337-1-09-172 ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ನಿಧಿ (ಸಿಎಂಜಿಆರ್‌ಎವೈ) ಇದರಡಿ ರೂ.32342.00 ಲಕ್ಷ ಅನುದಾನ ಒದಗಿಸಲಾಗಿರುತ್ತದೆ. ಸದರಿ ಅನುದಾನದಲ್ಲಿ 2020-21ನೇ ಸಾಲಿಗೆ ಸಿಎಂಜಿಆರ್‌ಎವೈ ಇದರಡಿ ಮುಂದುವರೆದಿರುವ ಕಾಮಗಾರಿಗಳಿಗೆ ಅಗತ್ಯವಿರುವ ಪೂರ್ಣ ಅನುದಾನವನ್ನು ಒದಗಿಸಿಕೊಂಡು ಬಾಕಿ ಅನುದಾನವನ್ನು 2019-20ನೇ ಸಾಲಿನಲ್ಲಿ ಕೈಗೊಂಡಿದ್ದ ಅತಿವೃಷ್ಟಿ ಹಾಗೂ ನೆರೆಹಾವಳಿಯಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆ ಕಾಮಗಾರಿಗಳ ಬಾಕಿ ಬಿಲ್ಲುಗಳನ್ನು ತೀರುವಳಿ ಮಾಡಲು ಆರ್ಥಿಕ ಇಲಾಖೆಯು ಅನುಮೋದನೆ ನೀಡಿರುತ್ತದೆ. ಆದುದರಿಂದ, 2020-21ನೇ ಸಾಲಿಗೆ ಸಿಎಂಜಿಆರ್‌ಎವೈ ಮುಂದುವರೆದ ಕಾಮಗಾರಿಗಳ ಹಾಗೂ 2019-20ನೇ ಸಾಲಿನಲ್ಲಿ ಕೈಗೊಂಡಿದ್ದ ಅತಿವೃಷ್ಟಿ ಹಾಗೂ ನೆರೆಹಾವಳಿಯಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆ ಕಾಮಗಾರಿಗಳ ಬಾಕಿ ಬಿಲ್ಲುಗಳನ್ನು ತೀರುವಳಿ ಮಾಡಲು ಕ್ರಿಯಾ ಯೋಜನೆಯನ್ನು ಸಿದ್ಧಪಡಿಸಿ ರಾಜ್ಯ ಮಟ್ಟದ ಸಮಿತಿಯ ಅಧ್ಯಕ್ಷರಾದ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆದು ಕ್ರಿಯಾ ಯೋಜನೆಗೆ ಮಂಜೂರಾತಿ ನೀಡಲಾಗಿರುತ್ತದೆ. ಕಾಮಗಾರಿವಾರು ವಿವರಗಳನ್ನು **ಅನುಬಂಧ**ದಲ್ಲಿ ಒದಗಿಸಿದೆ. |
| ಆ) | 2020-21ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯಿಂದ ಸಿ.ಎಂ.ಜಿ.ಆರ್.ವೈ. ಲೆಕ್ಕ ಶೀರ್ಷಿಕೆಯಡಿಯಲ್ಲಿ ಅನುದಾನವನ್ನು ನೀಡದಿದ್ದಲ್ಲಿ ಕಾರಣಗಳೇನು; ಪ್ರತಿ ವರ್ಷದಂತೆ ಈ ವರ್ಷವು ಸಿ.ಎಂ.ಜಿ.ಆರ್.ವೈ. ಲೆಕ್ಕ ಶೀರ್ಷಿಕೆಯಡಿಯಲ್ಲಿ ಅನುದಾನವನ್ನು ನೀಡಲು ಸರ್ಕಾರದ ಕೈಗೊಂಡ ಕ್ರಮವೇನು? (ಸಂಪೂರ್ಣ ವಿರವ ನೀಡುವುದು) | |

**ಲೋಇ/572/ಐಎಫ್ಎ/2020 (ಇ-ಕಚೇರಿ)**

**(ಗೋವಿಂದ ಎಂ ಕಾರಜೋಳ)**
ಉಪಮುಖ್ಯಮಂತ್ರಿಗಳು ಹಾಗೂ
ಲೋಕೋಪಯೋಗಿ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 344
ಸದಸ್ಯರ ಹೆಸರು :: ಶ್ರೀ ಗೌರಿಶಂಕರ್ ಡಿ.ಸಿ. (ತುಮಕೂರು ಗ್ರಾಮಾಂತರ)
ಉತ್ತರಿಸುವ ದಿನಾಂಕ :: 21.09.2020
ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ಗ್ರಾಮಾಂತರ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬೆಳ್ಳಾವಿ ಹೋಬಳಿಯ ಸೋರೆಕುಂಟೆ ಗ್ರಾಮದ ಸರ್ವೆ ನಂ.41ರಲ್ಲಿ ಕಾನೂನುಬಾಹಿರವಾಗಿ ಬಗರ್ ಹುಕುಂ ಸಾಗುವಳಿ ಚೀಟಿಯನ್ನು ನೀಡಿರುವುದು ಸರ್ಕಾರಕ್ಕೆ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಬಂದಿದ್ದಲ್ಲಿ, ಇದಕ್ಕೆ ಕಾರಣರಾದ ಅಧಿಕಾರಿಗಳ ಮೇಲೆ ಶಿಸ್ತು ಕ್ರಮ ಕೈಗೊಳ್ಳುವಂತೆ ತುಮಕೂರು ಜಿಲ್ಲಾಧಿಕಾರಿಗಳು ವರದಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಹಾಗಿದ್ದಲ್ಲಿ ವರದಿಯನ್ನು ಯಾವಾಗ ಸಲ್ಲಿಸಲಾಯಿತು; (ವರದಿಯ ಪ್ರತಿಯನ್ನು ನೀಡುವುದು) | ಹೌದು, ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ತುಮಕೂರು ಜಿಲ್ಲಾಧಿಕಾರಿಗಳು ದಿ:05.07.2019 ರಂದು ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. (ಅನುಬಂಧದಲ್ಲಿ ನೀಡಲಾಗಿದೆ.) |
| ಇ) | ಕಾನೂನುಬಾಹಿರವಾಗಿ ಬಗರ್ ಹುಕುಂ ಸಾಗುವಳಿ ಚೀಟಿಯನ್ನು ನೀಡುವಾಗ ಅಧಿಕಾರದಲ್ಲಿದ್ದ ಅಂದಿನ ಅಧ್ಯಕ್ಷರು ಹಾಗೂ ಅಧಿಕಾರಿಗಳು ಯಾರು; (ಅವರುಗಳ ಸಂಪೂರ್ಣ ವಿವರ ನೀಡುವುದು) | ಮಂಜೂರಿ ನಂತರ ಸಾಗುವಳಿ ಚೀಟಿಯನ್ನು ವಿತರಿಸುವ ಸಮಯದಲ್ಲಿದ್ದ ಅಧ್ಯಕ್ಷರು ಮತ್ತು ಅಧಿಕಾರಿ/ನೌಕರರ ವಿವರ ಈ ಕೆಳಕಂಡಂತಿದೆ.<br><br>1) ಶ್ರೀ.ಬಿ.ಸುರೇಶ್ ಗೌಡ, (ಅಂದಿನ ಮಾನ್ಯ ಶಾಸಕರು) ಮಾಜಿ ಶಾಸಕರು, ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರ<br>2) ಶ್ರೀ.ಪ್ರೀತಿ ಗೆಹ್ಲೋಟ್, ತಹಶೀಲ್ದಾರ್ (ಪ್ರೋಬೆಷನರಿ ಐ.ಎ.ಎಸ್. ಅಧಿಕಾರಿ)<br>3) ಶ್ರೀ.ಕೆ.ಆರ್.ನಾಗರಾಜು, ತಹಶೀಲ್ದಾರ್.<br>4) ಶ್ರೀ.ರವೀಶ್, ಶಿರಸ್ತೇದಾರ್.<br>5) ಶ್ರೀ.ನರಸಿಂಹರಾಜು, ಹೆಚ್ಚುವರಿ ಶಿರಸ್ತೇದಾರ್.<br>6) ಶ್ರೀ.ಪಿ.ಎಂ.ಗುರುದೇವಪ್ಪ, ವಿಷಯ ನಿರ್ವಾಹಕ (ಪ್ರ.ದ.ರಾ.ನಿ)<br>7) ಶ್ರೀ.ಚಂದ್ರಪ್ಪ, ರಾಜಸ್ವ ನಿರೀಕ್ಷಕರು.<br>8) ಶ್ರೀ.ರಂಗಮುತ್ತಯ್ಯ, ಗ್ರಾಮ ಲೆಕ್ಕಿಗ.<br><br>9) ಶ್ರೀ.ಚಂದ್ರಶೇಖರ.ಎಸ್.ಬಿ. ದ್ವಿದ.ಸ. ತಾಲ್ಲೂಕು ಕಚೇರಿ ತುಮಕೂರು. |

| | | |
|---|---|---|
| ಈ) | ಸದರಿ ಜಮೀನನ್ನು ಸರ್ಕಾರ ಸ್ವಾಧೀನಪಡಿಸಿಕೊಳ್ಳಲು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ತುಮಕೂರು ಉಪವಿಭಾಗಾಧಿಕಾರಿಗಳ ನ್ಯಾಯಾಲಯದಲ್ಲಿ ಪ್ರಕರಣ ಸಂ.ಎಲ್ಎನ್‌ಡಿ ಸಿಆರ್ 73/2019 ದಿನಾಂಕ:29.01.2020ರಂತೆ 44 ಜನ ಮಂಜೂರಿದಾರರ ಪೈಕಿ ಅನರ್ಹ ಫಲಾನುಭವಿಗಳಾದ:<br>1)ವೀರಣ್ಣ ಬಿನ್ ಕಾಳೇಗೌಡ ರವರಿಗೆ 2-30ಎ/ಗುಂಟೆ<br>2)ರಾಜಶೇಖರಯ್ಯ ಬಿನ್.ಅಡವೀಶಯ್ಯ ರವರಿಗೆ 3-30 ಎ/ಗುಂಟೆ<br>3)ಯಶೋದಮ್ಮ ಕೋಂ ರುದ್ರಯ್ಯ ರವರಿಗೆ 1-30 ಎ/ಗು<br>4)ದೇವರಾಜು ಬಿ.ಎಸ್. ಬಿನ್. ಸಿದ್ದಲಿಂಗಯ್ಯ 2-35 ಎ/ಗು ಜಮೀನಿನ ಮಂಜೂರಾತಿಯನ್ನು ವಜಾಗೊಳಿಸಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೆ.ಐ.ಎ.ಡಿ.ಬಿ ತುಮಕೂರು ರವರಿಗೆ ತಿಳಿಸಿ ಆದೇಶಿಸಲಾಗಿದೆ. ಸದರಿ ಜಮೀನು ಈಗಾಗಲೇ ಕೆ.ಐ.ಎ.ಡಿ.ಬಿ ಗೆ ಭೂಸ್ವಾಧೀನ ಆಗಿರುವುದರಿಂದ ಸದರಿ ಜಮೀನು ಕೆ.ಐ.ಎ.ಡಿ.ಬಿ ವಶದಲ್ಲಿರುತ್ತದೆ. ಆದ್ದರಿಂದ ಸರ್ಕಾರದ ವಶಕ್ಕೆ ಪಡೆದಿರುವುದಿಲ್ಲ. |
| ಉ) | ವರದಿಯ ಮೇಲೆ ಸರ್ಕಾರ ಇದುವರೆವಿಗೂ ಶಿಸ್ತು ಕ್ರಮ ಕೈಗೊಳ್ಳದಿರಲು ಕಾರಣಗಳೇನು; | ಜಿಲ್ಲಾಧಿಕಾರಿಗಳು, ತುಮಕೂರು ಇವರ ದಿ:05.07.2019ರ ವರದಿಯನ್ನಾಧರಿಸಿ ಈ ಪ್ರಕರಣದಲ್ಲಿ ಬಾಗಿಯಾಗಿರುವ ಅಧಿಕಾರಿ/ನೌಕರರುಗಳ ಬಗ್ಗೆ ಕಡತ ಸಂಖ್ಯೆ: ಕಂಇ 90 ಎಡಿಇ 2019ರಲ್ಲಿ ಶಿಸ್ತು ಕ್ರಮ ಕೈಗೊಳ್ಳುವ ಸಲುವಾಗಿ ಪರಿಶೀಲನಾ ಹಂತದಲ್ಲಿದೆ. |
| ಊ) | ಹಾಗಿದ್ದಲ್ಲಿ, ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ ಹಾಗೂ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ಜಿಲ್ಲಾಧಿಕಾರಿಗಳು, ತುಮಕೂರು ಇವರು ಉಪವಿಭಾಗಾಧಿಕಾರಿಗಳು, ತುಮಕೂರು ಉಪವಿಭಾಗ ಇವರ ನೇತೃತ್ವದಲ್ಲಿ ತನಿಖಾ ತಂಡ ರಚಿಸಿ ದಾಖಲೆಗಳ ಪರಿಶೀಲನೆ ನಡೆಸಲು ಹಾಗೂ ಆರೋಪಿತ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ದೋಷಾರೋಪಣಾ ಪಟ್ಟಿ ತಯಾರಿಸುವ ಹಂತದಲ್ಲಿದ್ದು, ಜಿಲ್ಲಾಧಿಕಾರಿ ತುಮಕೂರು ಇವರಿಂದ ಮಾಹಿತಿ ನಿರೀಕ್ಷಣೆಯಲ್ಲಿದೆ. |

**ಸಂಖ್ಯೆ: ಆರ್‌ಡಿ 48 ಎಲ್‌ಜಿಟಿ 2020**

(ಆರ್.ಅಶೋಕ್)
**ಕಂದಾಯ ಸಚಿವರು**

ಜಿಲ್ಲಾಧಿಕಾರಿಯವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

ಅನುಬಂಧ

ಮಿನಿವಿಧಾನಸೌಧ, ತುಮಕೂರು-572 102

ದೂರವಾಣಿ ಸಂಖ್ಯೆ (ಪ.ಶಾ): 0816-2272928/2251278

Email: deo.tumkur@gmail.com

ದಿನಾಂಕ : 05-07-2019.

ಸಂ. ಸಿಬ್ಬಂದಿ(1)ವಿವ/33/2019-20

ಗೆ,

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ,
ಡಾ: ಬಿ.ಆರ್. ಅಂಬೇಡ್ಕರ್ ವೀಧಿ,
ಬೆಂಗಳೂರು.

ಮಾನ್ಯರೇ,

ವಿಷಯ: ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಾನೂನು ಬಾಹಿರವಾಗಿ ಸಾಗುವಳಿ ಚೀಟಿಯನ್ನು ನೀಡಿರುವ ತುಮಕೂರು ತಹಶೀಲ್ದಾರ್‌ರಾದ ಶ್ರೀ ಕೆ.ಆರ್. ನಾಗರಾಜು ಇವರ ಮೇಲೆ ಶಿಸ್ತುಕ್ರಮಕೈಗೊಳ್ಳುವ ಬಗ್ಗೆ.

ಉಲ್ಲೇಖ:
1) ಮಾನ್ಯ ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ಶಾಸಕರ ಪತ್ರ ದಿನಾಂಕ 31.05.2019.
2) ಈ ಕಛೇರಿಯ ಅಧಿಕೃತ ಜ್ಞಾಪನ ಸಂಖ್ಯೆ ಎಲ್‌ಎನ್‌ಡಿ/ಟಿಎಂಕೆ/ಸಿಆರ್/11/2019-20, ದಿನಾಂಕ 31.05.2019 ರಂತೆ ತನಿಖಾ ತಂಡವು ವರದಿ ನೀಡಿರುವಂತೆ.
3) ಉಪವಿಭಾಗಾಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ನಂ.ಎಲ್‌ಎನ್‌ಡಿ/ಸಿಆರ್/73/ 19-20, ದಿನಾಂಕ 20.06.2019.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ತುಮಕೂರು ತಾಲ್ಲೂಕು, ಬೆಳ್ಳಾವಿ ಹೋಬಳಿ, ಸೋರೆಕುಂಟೆ ಗ್ರಾಮದ ಸ.ನಂ. 41 ರಲ್ಲಿ 44 ರೈತರಿಗೆ ಕಾನೂನು ಬಾಹಿರವಾಗಿ ಸಾಗುವಳಿ ಚೀಟಿ ವಿತರಣೆ ಮಾಡಿರುತ್ತಾರೆಂದು ಅಪಾದಿಸಿ ಮಾನ್ಯ ಲೋಕಾಯುಕ್ತಕ್ಕೆ ಶ್ರೀ.ಬಿ.ಎಸ್.ವೆಂಕಟೇಶ್ ರವರು ದೂರು ಸಲ್ಲಿಸಿರುತ್ತಾರೆಂದು ಹಾಗೂ ತಹಶೀಲ್ದಾರರವರು ಮಾನ್ಯ ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ಶಾಸಕರ ಗಮನಕ್ಕೆ ಬಾರದೆ ಚುನಾವಣಾ ನೀತಿ ಸಂಹಿತೆ ಘೋಷಣೆಯಾಗಿರುವ ಸಂದರ್ಭದಲ್ಲಿ ಅಕ್ರಮವಾಗಿ ಸಾಗುವಳಿ ಚೀಟಿಯನ್ನು ನೀಡಿರುತ್ತಾರೆಂದು ಮಾನ್ಯ ಶಾಸಕರು ಉಲ್ಲೇಖ(1)ರಂತೆ ದಿನಾಂಕ 31.05.2019 ರಂದು ಮನವಿ ಸಲ್ಲಿಸಿರುವ ಮೇರೆಗೆ ಉಲ್ಲೇಖ(2)ರಂತೆ ಈ ಕಛೇರಿಯಿಂದ ತಂಡವನ್ನು ರಚಿಸಿ, ಸದರಿ ತಂಡವು ವರದಿಯನ್ನು ನೀಡಿರುತ್ತಾರೆ.

ಉಲ್ಲೇಖ(3)ರಂತೆ ರಚಿಸಿರುವ ತಂಡದ ವಿವರಣೆಯು ಈ ಕೆಳಕಂಡಂತಿರುತ್ತದೆ :

6-7-2019

ಮಾನ್ಯ ಜಿಲ್ಲಾಧಿಕಾರಿಗಳ ಆದೇಶದಂತೆ ದಿ:31/05/2019 ರಂದು ಕಾನೂನು ಬಾಹಿರ ಸಾಗುವಳಿ ಚೀಟಿ ನೀಡಿರುವ ಬಗ್ಗೆ ಸೋರೆಕುಂಟೆ ಗ್ರಾಮದ ಸರ್ವೆ ನಂ.41ಕ್ಕೆ ಸಂಬಂಧಿಸಿದಂತೆ ಕೆಳಕಂಡ ದಾಖಲಾತಿಗಳನ್ನು ವಶಕ್ಕೆ ಪಡೆಯಲಾಗಿರುತ್ತದೆ.

1. 2014 ನೇ ಸಾಲಿನ ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ಬಗರ್ ಹುಕುಂ ಸಕ್ರಮೀಕರಣ ಸಮಿತಿ ನಡವಳಿ ಪ್ರತಿ
2. ಸೋರೆಕುಂಟೆ ಗ್ರಾಮ ಸರ್ವೆ ನಂ.41 ರಲ್ಲಿ 44 ಜನರಿಗೆ ಮಂಜೂರಾತಿ ನೀಡಿರುವ ಸಾಗುವಳಿ ಪತ್ರಗಳು.
3. ಸೋರೇಕುಂಟೆ ಗ್ರಾಮದ ಸರ್ವೆ ನಂ.41 ರ ಮಂಜೂರಾತಿ ಕಡತ ಸಂಖ್ಯೆ:ಎಲ್.ಎನ್.ಡಿ.ಆರ್.ಯು.ಸಿ (ಬಿ.ಎಲ್.ಬಿ)84/99-2000 ರ ಮೂಲ ಮಂಜೂರಾತಿ ಕಡತ
4. ಬೆಳ್ಳಾವಿ ಹೋಬಳಿಯ ನಮೂನೆ 53 ಅರ್ಜಿಗಳ ಸ್ವೀಕೃತಿ ಪ್ರತಿ.

ಮೇಲ್ಕಂಡ ಲಭ್ಯ ದಾಖಲಾತಿಗಳನ್ನು ಪರಿಶೀಲಿಸಿದೆ. ಪ್ರಸ್ತಾವಿತ ತುಮಕೂರು ತಾಲ್ಲೂಕು ಬೆಳ್ಳಾವಿ ಹೋಬಳಿ, ಸೋರೆಕುಂಟೆ ಗ್ರಾಮದ ಸರ್ವೆ ನಂ.41 ರ 2018-19ನೇ ಸಾಲಿನ ಪಹಣಿ ದಾಖಲೆಗಳನ್ನು ಪರಿಶೀಲಿಸಲಾಗಿ ಕಾಲಂ 3 ರಲ್ಲಿ 509-22 ಎಕರೆ ಒಟ್ಟು ವಿಸ್ತೀರ್ಣವಿದ್ದು ಸದರಿ ವಿಸ್ತೀರ್ಣವು (ಬ) ಖರಾಬಿನಲ್ಲಿದ್ದು, ಬಾಕಿ ಸರ್ಕಾರಿ ಖರಾಬು 218 ಎಕರೆ 34 ಗುಂಟೆ ಇರುವುದಾಗಿ ಕಂಡು ಬರುತ್ತದೆ ಉಳಿಕೆ ವಿಸ್ತೀರ್ಣವು ಬಗರ್ ಹುಕುಂ ಸಾಗುವಳಿಯಲ್ಲಿ ವಿವಿಧ ಫಲಾನುಭವಿಗಳಿಗೆ ಮಂಜೂರಾಗಿರುತ್ತದೆ ಪ್ರಸ್ತಾವಿತ ಈ ಪ್ರಕರಣದಲ್ಲಿ ಸಂಖ್ಯೆ:ಎಲ್.ಎನ್.ಡಿ.ಆರ್.ಯು.ಸಿ (ಬಿ.ಎಲ್.ಬಿ)84/99-2000 ತಾಲ್ಲೂಕು ಕಛೇರಿ ಕಡತದಂತೆ ಸರ್ಕಾರದ ಪತ್ರ ಸಂಖ್ಯೆ:ಆರ್.ಡಿ.61/ಎಲ್.ಜಿ.ಬಿ91 ದಿ:19/04/1991 ರ ಸೂಚನೆಯಂತೆ ನಮೂನೆ 53 ರಲ್ಲಿ ಅರ್ಜಿ ಸಲ್ಲಿಸಿ ಬಗರ್ ಹುಕುಂ ಸಾಗುವಳಿಯನ್ನು ಸಕ್ರಮಗೊಳಿಸಲು ಒಟ್ಟು 54 ಜನರು ಮನವಿ ಸಲ್ಲಿಸಿರುವ ಮೇರೆಗೆ ಕಡತ ನಡೆದಿರುತ್ತದೆ. ಪ್ರಸ್ತಾವಿತ ಸರ್ವೆ ನಂಬರ್‌ನಲ್ಲಿ 275 ಎಕರೆ 23 ಗುಂಟೆ, ಕೆ.ಐ.ಎ.ಡಿ.ಬಿಗೆ ಭೂ ಸ್ವಾಧೀನವಾಗಿರುತ್ತದೆ. ಪ್ರಸ್ತಾವಿತ ಕಡತದಲ್ಲಿ 54 ಜನರ ಪೈಕಿ ಕ್ರಮ ಸಂಖ್ಯೆ 47 ರಿಂದ 54 ರವರೆಗೆ ಒಟ್ಟು 8 ಜನರು ಯಾರೂ ಸಹ ಅಕ್ರಮ ಸಾಗುವಳಿ ಮಾಡಿಲ್ಲ ಎಂದು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿ ಸಭೆಯಲ್ಲಿ ತೀರ್ಮಾನಿಸಿ ದಿ:17/02/2018 ರಂದು ನಡೆದ ಸಭೆಯಲ್ಲಿ ವಜಾಗೊಳಿಸಲಾಗಿರುತ್ತದೆ. ( ಹಾಗೂ ಸರ್ವೆ ನಂ.31 ರಿಂದ ಕ್ರಸಂ.2 ರ ಕಾದ್ರಯ್ಯ ಬಿನ್ ದಾಸಪ್ಪ ಮತ್ತು ಸರ್ವೆ ನಂ.30 ರ ಕ್ರ.ಸಂ 3 ರ ಪುಟ್ಟಲಿಂಗಾಚಾರ್ ಬಿನ್ ಮುದ್ದಾಚಾರ್ ರವರುಗಳು ಅನುಭವದ ಮೇರೆಗೆ ಸರ್ವೆ ನಂ.41ಕ್ಕೆ ಅರ್ಜಿಯನ್ನು ವರ್ಗಾಯಿಸಿಕೊಂಡು ಬಗರ್ ಹುಕುಂ ಸಕ್ರಮಿಕರಣ ಸಮಿತಿಯಲ್ಲಿ ಮಂಜೂರಾತಿ ಮಾಡಲಾಗಿರುತ್ತದೆ. ಸದರಿ ಜಮೀನಿನ ಸಂಬಂಧ 46 ಜನರ ಪೈಕಿ ಇಬ್ಬರೂ ಅರ್ಜಿದಾರರು ಎರಡು ಬಾರಿ ಅರ್ಜಿ ಸಲ್ಲಿಸಿರುವುದರಿಂದ ಸದರಿ ಅರ್ಜಿಗಳನ್ನು ವಜಾಗೊಳಿಸಿ ಒಟ್ಟು 44 ಅರ್ಜಿದಾರರ ಅರ್ಜಿಗಳನ್ನು ಬಗರ್ ಹುಕುಂ ಸಕ್ರಮಿಕರಣ ಸಮಿತಿಯಲ್ಲಿ ಮಂಜೂರು ಮಾಡಲಾಗಿರುತ್ತದೆ. ಸದರಿ ಮಂಜೂರಾತಿ ಬಗ್ಗೆ ಆಕ್ಷೇಪಣೆಗಳ ಕುರಿತು ಗ್ರಾಮದಲ್ಲಿ ನಮೂನೆ 46ನ್ನು ಪ್ರಚಾರ ಮಾಡಲಾಗಿ ಕ್ರ. ಸಂ.31, 36 ಮತ್ತು 35 ರ ಮಂಜೂರಿದಾರರ ಬಗ್ಗೆ ತಕರಾರು ಬಂದಿದ್ದು, ಈ ಬಗ್ಗೆ ಪರಿಶೀಲಿಸಿ ತಕರಾರು ಅರ್ಜಿಗಳನ್ನು ಮನ್ನಾ ಮಾಡಿ ಒಟ್ಟು 46 ಮಂಜೂರಿದಾರರ ಮಂಜುರಾತಿಯನ್ನು ಸ್ಥಿರಿಕರಿಸಲಾಗಿರುತ್ತದೆ. ಪ್ರಸ್ತಾವಿತ ಮಂಜೂರಿದಾರರಿಗೆ ಮಂಜೂರಾತಿಗೆ ಬಗರ್ ಹುಕುಂ ಸಾಗುವಳಿ ಸಮಿತಿ ತೀರ್ಮಾನದಂತೆ ಮತ್ತು ಎರಡನೇ ಸಮಿತಿಯಲ್ಲಿ ಸ್ಥಿರಿಕರಣಗೊಳಿಸಿ ತೀರ್ಮಾನಿಸಿರುವಂತೆ ಜಮೀನು ಮಂಜೂರು ಮಾಡಲು ಅಧಿಕೃತ ಜ್ಞಾಪನ ಹೊರಡಿಸಲಾಗಿರುತ್ತದೆ. ಪ್ರಸ್ತಾವಿತ ಜಮೀನು ಕೆ.ಐ.ಎ.ಡಿ.ಬಿಗೆ ಭೂ ಸ್ವಾಧಿನವಾಗಿರುವುದರಿಂದ ಸರ್ಕಾರದ ಪತ್ರದ ಸಂಖ್ಯೆ:ಆರ್.ಡಿ35/ಎಲ್.ಜೆ.ಟಿ/2014 ದಿ:07/02/2018 ರಂತೆ. ಪರಿಹಾರ ಪಡೆಯಲು ಮಾತ್ರ ಎಂಬ ಷರತ್ತಿನೊಂದಿಗೆ ಮಂಜೂರು ಮಾಡಲು ಕಿಮ್ಮತ್ತು ಹಣ ಪಾವತಿಸಲು ಎಲ್ಲರಿಗೆ ನೋಟೀಸ್ ನೀಡಲಾಗಿರುತ್ತದೆ. ನೋಟಿಸು ನೀಡಿರುವಂತೆ ನಿಗಧಿತ ಕಿಮ್ಮತ್ತು ಹಾಗೂ ಹಣ ಪಾವತಿಸ...

44 ಜನರಿಗೆ ಸಾಗುವಳಿ ಚೀಟಿಯನ್ನು ಷರತ್ತಿಗೆ ಒಳಪಡಿಸಿ ದಿ:23/02/2019 ರಂದು ಸಾಗುವಳಿ ಚೀಟಿ ನೀಡಲಾಗಿರುತ್ತದೆ.

ಆರೋಪದಲ್ಲಿ ಆಪಾದಿಸಿರುವಂತೆ ಕಾನೂನು ಬಾಹಿರವಾಗಿ ಸಾಗುವಳಿ ಚೀಟಿ ನೀಡಿರುತ್ತಾರೆಂಬ ಬಗ್ಗೆ ಲಭ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಪ್ರಸ್ತಾವಿತ 44 ಜನ ಫಲಾನುಭವಿಗಳು ಅರ್ಜಿ ನಮೂನೆ 53 ರಲ್ಲಿ ಸರ್ಕಾರ ನಿಗದಿ ಪಡಿಸಿರುವ ದಿನಾಂಕದೊಳಗೆ ಅರ್ಜಿ ಸಲ್ಲಿಸಿರುವುದು ಬೆಳ್ಳಾವಿ ಹೋಬಳಿ ನಮೂನೆ 53 ರ ಸ್ವೀಕೃತಿ ವಹಿ ದಾಖಲೆಗಳಿಂದ ಕಂಡು ಬರುತ್ತದೆ. ಪ್ರಸ್ತಾವಿತ ಮಂಜೂರಿದಾರರಿಗೆ ದಿ:17/02/2018 ರಂದು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯಲ್ಲಿ ವಿಷಯ ಸಂಖ್ಯೆ 3 ರಲ್ಲಿ ಚರ್ಚಿಸಿ ಅನುಮೋದನೆ ನೀಡಲಾಗಿರುತ್ತದೆ. ಮಂಜೂರಿ ಬಗ್ಗೆ ತಕರಾರು ಏನಾದರೂ ಇರುವ ಬಗ್ಗೆ ನಮೂನೆ 4ನ್ನು ಪ್ರಚುರ ಪಡಿಸಿ ಆಕ್ಷೇಪಣೆಗಳ ಬಗ್ಗೆ ಪರಿಶೀಲಿಸಿ ಕಡತದ ಕಂಡಿಕೆ (8) ರಿಂದ 11 ರವರೆಗೆ ವಿವರಿಸಲಾಗಿದ್ದು ಆದರೆ ವಿಷಯ ನಿರ್ವಾಹಕರಾಗಲಿ ಶಿರಸ್ತೇದಾರರಾಗಲಿ ಯಾರೂ ಸಹ ಕಡತ ಯಾವಾಗ ಮಂಡಿಸಲಾಗಿದೆ ಎಂಬ ಬಗ್ಗೆ ದಿನಾಂಕ ನಮೂದಿಸಿರುವುದಿಲ್ಲ. ನಂತರ ಕಂಡಿಕೆ (10) ರಲ್ಲಿ ತಹಶೀಲ್ದಾರ್ ರವರಿಗೆ ಗುರುತಿಸಲಾಗಿದ್ದು ತಹಶೀಲ್ದಾರ್ ರವರು ಮಂಜೂರಾತಿಯನ್ನು ಸ್ಥಿರೀಕರಿಸುವ ಬಗ್ಗೆ ತಮ್ಮ ಷರಾ ನಮೂದುಮಾಡಿರುವುದಿಲ್ಲ.ಈ ಸಮಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅಧಿಕಾರಿಗಳು/ನೌಕರರು ಹಾಗೂ ಕಂಡಿಕೆ 11 ರಲ್ಲಿ ಮಂಜೂರಾತಿಯನ್ನು ಸ್ಥಿರೀಕರಿಸುವುದಾಗಿ ಅಧ್ಯಕ್ಷರು ಮತ್ತು ಸದಸ್ಯರು ಸಹಿಮಾಡಿದ್ದು. ಆದರೆ ನಡವಳಿ ಪುಸ್ತಕ ಪರಿಶೀಲಿಸಲಾಗಿ ಸದರಿ ನಡವಳಿಯಲ್ಲಿ ವಿಷಯ ಮಂಡಿಸಿ ಅನುಮೋದನೆ ಯಾಗಿರುವ ಬಗ್ಗೆ ದಾಖಲೆ ಕಂಡು ಬರುತ್ತಿರುವುದಿಲ್ಲ.ಈ ಸಮಯದಲ್ಲಿ ಸಭಾ ನಡವಳಿಯಲ್ಲಿ ನಮೂದಿಸಿ ಸಹಿಗಳನ್ನು ಪಡೆಯದೆ ಸಾಗುವಳಿ ಚೀಟಿಗಳನ್ನು ಸಂಬಂಧಿಸಿದ ವಿಷಯ ನಿರ್ವಾಹಕರು, ಶಿರಸ್ತೇದಾರರು ಮತ್ತು ತಹಶೀಲ್ದಾರ್ ರವರು ನೀಡಿರುವುದು ಕಂಡುಬಂದಿದ್ದು ಕರ್ತವ್ಯ ಲೋಪವಾಗಿರುವುದು ಕಂಡುಬಂದಿರುತ್ತದೆ.

ಮಂಜೂರಿದಾರರಿಗೆ ನೀಡಲಾಗಿರುವ ಸಾಗುವಳಿ ಚೀಟಿಗಳನ್ನು ಪರಿಶೀಲಿಸಲಾಗಿ ಎಲ್ಲಾ 44 ಸಾಗುವಳಿ ಚೀಟಿಗಳನ್ನು ದಿ:23/02/2019 ರಂದು ಕೆ.ಐ.ಎ.ಡಿ.ಬಿ ಇಂದ ಭೂ ಸ್ವಾಧೀನವಾದ ಬಗ್ಗೆ ಪರಿಹಾರ ಪಡೆಯಲು ಮಾತ್ರ ಎಂದು ಷರತ್ತು ವಿಧಿಸಿ ಸಾಗುವಳಿ ಪತ್ರ ನೀಡಲಾಗಿರುತ್ತದೆ. ಲೋಕಸಭಾ ಚುನಾವಣೆಗೆ ದಿ:10/03/2019 ರಂದು ಚುನಾವಣಾ ನೀತಿ ಸಂಹಿತೆ ಜಾರಿಗೆ ಬಂದಿದ್ದು. ಇದಕ್ಕೆ ಮುಂಚೆ ದಿ:23/02/2019 ರಂದು ಸಾಗುವಳಿ ಚೀಟಿ ವಿತರಿಸಿದ್ದು ಚುನಾವಣಾ ನೀತಿ ಸಂಹಿತೆ ಜಾರಿಗೆ ಬರುವ ಮುನ್ನ ಸಾಗುವಳಿ ಚೀಟಿಗಳಿಗೆ ಅನುಮೋದನೆ ನೀಡಿ ವಿತರಣೆ ಮಾಡಿರುವುದು ಕರ್ತವ್ಯ ಲೋಪವಾಗಿರುತ್ತದೆ.ಒಟ್ಟಾರೆಯಾಗಿ ಕಡತ ಪರಿಶೀಲನೆಯಿಂದ ತಹಶೀಲ್ದಾರ್ ರವರು ಮಂಜೂರಾತಿಯನ್ನು ಸ್ಥಿರೀಕರಿಸುವಾಗ ತಮ್ಮ ಷರಾವನ್ನು ನಮೂದಿಸದೆ ಮತ್ತು ಮಂಜೂರಾತಿ ಬಗ್ಗೆ ತಕರಾರು ಇಲ್ಲವೆಂದು ಮಾಹಿತಿ ಪಡೆದು ಸ್ಥಿರೀಕರಿಸಲು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿ ಸಭೆ ಕರೆದು (ತೀರ್ಮಾನಿಸಿ) ಚರ್ಚಿಸಿ ನಡವಳಿಯಲ್ಲಿ ತೀರ್ಮಾನ ಕೈಗೊಳ್ಳಬೇಕಾಗಿದ್ದು ಆದರೆ ಸಂಬಂಧಿಸಿದ ಕಡತದಲ್ಲಿಯೇ ಅಧ್ಯಕ್ಷರ ಮತ್ತು ಸದಸ್ಯರ ಅನುಮೋದನೆಯನ್ನು ಮಂಜೂರಾತಿ ಸ್ಥಿರೀಕರಣಕ್ಕೆ ಪಡೆದಿರುವುದು ಕರ್ತವ್ಯಲೋಪವಾಗಿರುತ್ತದೆ.ಈ ಬಗ್ಗೆ ಸಂಬಂಧಿಸಿದ ತಹಶೀಲ್ದಾರ್ ರವರ ಕರ್ತವ್ಯ ಲೋಪದ ಬಗ್ಗೆ ಮುಂದಿನ ಕ್ರಮವಹಿಸಬಹುದಾಗಿ ತನಿಖಾ ತಂಡವು ಅಭಿಪ್ರಾಯ ಪಡಲಾಗಿರುತ್ತದೆ.

<u>ಮಾನ್ಯ ಶಾಸಕರು ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರ ರವರು ಸಲ್ಲಿಸಿರುವ ಮನವಿಯಲ್ಲಿನ ಲೋಪಗಳ ಬಗ್ಗೆ ಈ ಕೆಳಕಂಡಂತೆ ಪರಿಶೀಲಿಸಲಾಗಿರುತ್ತದೆ</u>

| | |
|---|---|
| ಆ 1<br><br>ಉದಾ 2 | ಸೋರೆಕುಂಟೆ ಗ್ರಾಮದಲ್ಲಿ ಹಾಗೂ ತುಮಕೂರು ಗ್ರಾಮಾಂತರ ಮತಕ್ಷೇತ್ರದಲ್ಲಿ ಇಲ್ಲದವರನ್ನು ಸಹಾ ಅಂದರೆ ಶಿರಾ ತಾಲ್ಲೂಕಿನ ಕಳ್ಳಂಬೆಳ್ಳ ಹೋಬಳಿ, ತರೂರು ಗ್ರಾಮದ ದೊಡ್ಡೀರಪ್ಪ ಬಿನ್ ಹುಚ್ಚಯ್ಯ ನವರಿಗೆ 2 ಎಕರೆ 29 ಗುಂಟೆ ಹಾಗೂ ಶಿವಣ್ಣ ಬಿನ್ ಹುಚ್ಚಯ್ಯ ರವರಿಗೆ 1 ಎಕರೆ ಸಾಗುವಳಿ ಚೀಟಿಯನ್ನು ನೀಡಲಾಗಿದೆ.ಈ ಇಬ್ಬರು ಅಣ್ಣತಮ್ಮಂದಿರಾಗಿದ್ದು ಒಂದೇ ಕುಟುಂಬದ ಸದಸ್ಯರಾಗಿರುತ್ತಾರೆ ಸದರಿಯವರಿಗೆ ಈ ಹಿಂದೆ 1978-79ನೇ ಸಾಲಿನ ಬಗರ್ ಹುಕುಂ ಸಮಿತಿಯಲ್ಲಿಯೂ ಸಹಾ ದೊಡ್ಡೀರಪ್ಪ ಬಿನ್ ಹುಚ್ಚಯ್ಯನವರಿಗೆ ಸೋರೆಕುಂಟೆ ಗ್ರಾಮದ ಸರ್ವೆ ನಂ.41 ರಲ್ಲಿ 3 ಎಕರೆ ಹಾಗು ಶಿವಣ್ಣ ಬಿನ್ ಹುಚ್ಚಯ್ಯ ರವರಿಗೆ ಸೋರೆಕುಂಟೆ ಗ್ರಾಮದ ಸರ್ವೆ ನಂ.41 ರಲ್ಲಿ 2 ಎಕರೆ ಜಮೀನು ಮಂಜೂರಾಗಿರುತ್ತದೆ.<br>ಸದರಿಯವರು ನಮೂನೆ 53 ರನ್ನು ಸಲ್ಲಿಸುವ ಸಂದರ್ಭದಲ್ಲಿ 20 ರೂಪಾಯಿ ಮುಖಬೆಲೆಯುಳ್ಳ ಈ ಸ್ಟಾಂಪಿನಲ್ಲಿ ಒಂದು ಪ್ರಮಾಣ ಪತ್ರವನ್ನು ಸಲ್ಲಿಸಿದ್ದು ಸದರಿ ಪ್ರಮಾಣ ಪತ್ರದಲ್ಲಿ ಈತ ಶಿರಾ ತಾಲ್ಲೂಕಿನ ರೈತ ಎಂದು ತಾನೇ ಸಾಬೀತು ಮಾಡಿಕೊಂಡಿದ್ದು ಹಾಗೂ ಈತನಿಗೆ ಪಿತ್ರಾರ್ಜಿತವಾಗಿ 4 ಎಕರೆ 22 ಗುಂಟೆ ಆಸ್ತಿ ಇರುವುದನ್ನು ತಾನೇ ಸ್ವತಹ ಪ್ರಮಾಣ ಪತ್ರದಲ್ಲಿ ಪ್ರಮಾಣಿಕರಿಸಿರುತ್ತಾರೆ. ಇದು ಎರಡನೆ ಅಪರಾದವಾಗಿರುತ್ತದೆ. ಹಾಗೂ ಸುಮಾರು 5 ರಿಂದ 6 ಎಕರೆಗೂ ಅಧಿಕ ಪಿತ್ರಾರ್ಜಿತ ಆಸ್ತಿ ಇದ್ದರೂ ಸಹಾ ಅಂತಹ ರೈತರುಗಳಿಗೂ ಸಹಾ ಸಾಗುವಳಿ ಚೀಟಿಯನ್ನು ನೀಡಿರುತ್ತಾರೆ |
| ವಿವರಣೆ | ದೊಡ್ಡೀರಪ್ಪ ಬಿನ್ ಹುಚ್ಚಯ್ಯರವರಿಗೆ ಹಾಲಿ ಮಂಜುರಾತಿಯಲ್ಲಿ 2-29 ಗುಂಟೆ ಜಮೀನು ಮಂಜೂರಾಗಿದ್ದು, ಇವರಿಗೆ ಅಹವಾಲು ತಃಖ್ತೆಯಂತೆ ತರೂರು ಸ.ನಂ. 164/3 ರಲ್ಲಿ 0-28 ಗುಂಟೆ, 273/5 ರಲ್ಲಿ 1-21 ಗುಂಟೆ ಒಟ್ಟು 2-09 ಗುಂಟೆ ಇದ್ದು ಇದೀಗ ಮಂಜೂರಿಯಾಗಿರುವುದು 2-29 ಗುಂಟೆ ಒಟ್ಟಾರೆ 4-28 ಗುಂಟೆ ಜಮೀನು ಮಂಜೂರಾಗಿದ್ದು, ಸರ್ಕಾರ ನಿಗಧಿಪಡಿಸಿರುವ ವಿಸ್ತೀರ್ಣದಷ್ಟೇ ಜಮೀನಿರುತ್ತದೆ. ಕಡತದಲ್ಲಿ ದೊಡ್ಡೀರಪ್ಪ ರವರು ದಿನಾಂಕ 31-03-2017 ರಂದು ಮಾಡಿಕೊಂಡಿರುವ ವಿಭಾಗ ಪತ್ರದಂತೆ ತರೂರು ಗ್ರಾಮದ ಸ.ನಂ. 164/3 0-28 ಗುಂಟೆ ಜಮೀನಿನಲ್ಲಿ ಬೃಹತ್ ವಿದ್ಯುತ್ ಲೈನ್ ಹಾದು ಹೋಗಿದ್ದು, ಇದರಿಂದ ಬಂದ ಹಣವನ್ನು ಸೇರಿ ವಿಭಾಗ ಮಾಡಿಕೊಂಡಿರುವುದು ಕಂಡುಬರುತ್ತದೆ. ಆದರೆ ದೂರಿನಲ್ಲಿ ತಿಳಿಸಿರುವಂತೆ ಸದರಿ ರವರಿಗೆ ಪಿತ್ರಾರ್ಜಿತ ಆಸ್ತಿ 4 ಎಕರೆ 22 ಗುಂಟೆ ಇರುವುದು ಕಂಡುಬರುವುದಿಲ್ಲ. ರೂ 20 ರ ಪ್ರಮಾಣ ಪತ್ರದಲ್ಲಿ ತಮಗೆ ತರೂರು ಗ್ರಾಮದಲ್ಲಿ 1 ಎಕರೆ 21 ಗುಂಟೆ ಜಮೀನು ಇರುವುದಾಗಿ ಇದನ್ನು ಹೊರತುಪಡಿಸಿ ಬೇರೆ ಇರುವುದಿಲ್ಲ ಎಂದು ಪ್ರಮಾಣೀಕರಿಸಿ ನೀಡಿದ್ದು, ಅದೇ ರೀತಿ ಅಹವಾಲು ತಃಖ್ತೆಯಲ್ಲಿಯೂ ಸಹ ತಿಳಿಸಿರುತ್ತಾರೆ. ದೂರಿನಲ್ಲಿ ತಿಳಿಸಿರುವಂತೆ ಮಂಜೂರಿದಾರರಿಗೆ 1978-79 ನೇ ಸಾಲಿನ ಬಗರ್ ಹುಕುಂ ಸಮಿತಿಯಲ್ಲಿ ದೊಡ್ಡೀರಪ್ಪ ಬಿನ್ ಹುಚ್ಚಯ್ಯ ರವರಿಗೆ ಸೋರೆಕುಂಟೆ ಗ್ರಾಮದ ಸರ್ವೆ ನಂ.41 ರಲ್ಲಿ [illegible] ಎಕರೆ ಮಂಜೂರಾಗಿರುವುದಾಗಿ ತಿಳಿಸಿದ್ದು ಈ ಬಗ್ಗೆ ಲಭ್ಯವಿರುವ ಕೈಬರಹ ಪಹಣಿಗಳನ್ನು ಪರಿಶೀಲಿಸಿಲಾಗಿ ಸ.ನಂ.41 ರ 79-80ನೇ ಸಾಲಿನ ಕೈಬರಹ ಪಹಣಿ |

| | |
|---|---|
| | ಕಾಲಂ 12(2) ರಲ್ಲಿ ದೊಡ್ಡೀರಪ್ಪ ಬಿನ್ ಹುಚ್ಚಯ್ಯ 2 ಎಕರೆ 20 ಗುಂಟೆ ಎಂದು ನಮೂದಾಗಿದ್ದು, ಆದರೆ ಇವರಿಗೆ ಸದರಿ ಜಮೀನು ಮಂಜೂರಾಗಿರುವ ಬಗ್ಗೆ ಮಂಜೂರಾತಿ ಕಡತ ಲಭ್ಯವಿಲ್ಲದಿರುವುದಾಗಿ ತಹಶೀಲ್ದಾರ್ ಕಛೇರಿ ವಿಷಯ ನಿರ್ವಾಹಕರು ಮೌಖಿಕವಾಗಿ ತಿಳಿಸಿರುತ್ತಾರೆ. |
| ವಿವರಣೆ | ಶಿವಣ್ಣ ಬಿನ್ ಹುಚ್ಚಯ್ಯ ರವರಿಗೆ 1 ಎಕರೆ ಜಮೀನು ಮಂಜೂರಿಯಾಗಿದ್ದು ಸದರಿರವರು ತಮ್ಮ ಅಹವಾಲು ತಃಖ್ತೆಯಲ್ಲಿ ಕರೂರು ಗ್ರಾಮದ ಸರ್ವೆ ನಂ.213 ರಲ್ಲಿ 0.4 ಗುಂಟೆ ಸ ನಂ.216/1 ರಲ್ಲಿ 0.22 ಗುಂಟೆ, ಸ ನಂ.213/1 ರಲ್ಲಿ 0.04 ಗುಂಟೆ, ಸ ನಂ.216/5 ರಲ್ಲಿ 0.06 ಗುಂಟೆ ಸ ನಂ.273/3 ರಲ್ಲಿ 1 ಎಕರೆ 19 ಗುಂಟೆ ಒಟ್ಟು 2 ಎಕರೆ 11 ಗುಂಟೆ ಇರುವುದಾಗಿ ತಿಳಿಸಿರುತ್ತಾರೆ. ಅದೇ ರೀತಿ ಪ್ರಮಾಣ ಪತ್ರದಲ್ಲಿಯೂ ಸಹ 2 ಎಕರೆ 4 ಗುಂಟೆ ಜಮೀನು ಇರುವುದಾಗಿ ತಿಳಿಸಿರುತ್ತಾರೆ. ಒಟ್ಟಾರೆ ಸ್ವಂತ ಜಮೀನು 2 ಎಕರೆ 11 ಗುಂಟೆ ಮತ್ತು ಇದೀಗ ಮಂಜೂರಾಗಿರುವುದು 1 ಎಕರೆ ಆಗಿದ್ದು ಒಟ್ಟು 3 ಎಕರೆ 11 ಗುಂಟೆ ಜಮೀನಾಗುತ್ತದೆ. ಆದರೆ ಸದರಿ ರವರಿಗೆ 1978-79ನೇ ಸಾಲಿನ ಬಗರ್ ಹುಕುಂ ಸಮಿತಿಯಲ್ಲಿ ಸೋರೆಕುಂಟೆ ಗ್ರಾಮದ ಸರ್ವೆ ನಂ.41 ರಲ್ಲಿ 2 ಎಕರೆ ಜಮೀನು ಮಂಜೂರಾಗಿರುವುದಾಗಿ ದೂರು ಅರ್ಜಿಯಲ್ಲಿ ತಿಳಿಸಿದ್ದು, ಈ ಬಗ್ಗೆ ಲಭ್ಯವಿರುವ ಕೈಬರಹದ ಪಹಣಿಗಳನ್ನು ಪರಿಶೀಲಿಸಲಾಗಿ 1979-80ನೇ ಸಾಲಿನ ಕೈಬರಹದ ಪಹಣಿ ಕಾಲಂ 12(2) ರಲ್ಲಿ ಈರಣ್ಣ ಬಿನ್ ಹುಚ್ಚಣ್ಣ 2 ಎಕರೆ ಎಂದು ದಾಖಲೆ ಇದ್ದು, ಇದರಂತೆ ಇವರಿಗೆ ಮಂಜೂರಾಗಿರುವ ಬಗ್ಗೆ ಪರಿಶೀಲಿಸಲು ತಾಲ್ಲೂಕು ಕಛೇರಿ ವಿಷಯ ನಿರ್ವಾಹಕರವರು ಈ ಸಾಲಿನ ಮಂಜೂರಿ ಕಡತ ಲಭ್ಯವಿಲ್ಲ ಎಂದು ಮೌಖಿಕವಾಗಿ ತಿಳಿಸಿರುತ್ತಾರೆ. |
| ದಾವಾ 3 | ವೀರಣ್ಣ ಬಿನ್ ಕಾಳೇಗೌಡ ಇವರಿಗೆ ಈಗ 2 ಎಕರೆ 30 ಗುಂಟೆ ಸಾಗುವಳಿ ನೀಡಿದ್ದು ಇವರ ಹೆಂಡತಿಯಾದ ರತ್ನಮ್ಮನ ಹೆಸರಿಗೆ ಸರ್ವೆ ನಂಬರ್ 41 ರಲ್ಲಿ 3 ಎಕರೆ ಮತ್ತು ಈತ ವೀರಣ್ಣನ ಹೆಸರಿಗೆ ಸರ್ವೆ ನಂ.35 ರಲ್ಲಿ 2 ಎಕರೆ 25 ಗುಂಟೆ ಜಮೀನು ಇದ್ದರೂ ಸಹಾ ಮತ್ತೆ 2 ಎಕರೆ 30 ಗುಂಟೆ ಸಾಗುವಳಿ ಚೀಟಿಯನ್ನು ನೀಡಿರುತ್ತಾರೆ. |
| ವಿವರಣೆ | ವೀರಣ್ಣ ಬಿನ್ ಕಾಳೇಗೌಡ ರವರಿಗೆ ಪ್ರಸ್ತುತವಾಗಿ 2 ಎಕರೆ 30 ಗುಂಟೆ ಮಂಜೂರಿಯಾಗಿರುತ್ತದೆ. ಅಹವಾಲು ತಃಖ್ತೆಯಂತೆ ಇವರಿಗೆ ಸರ್ವೆ ನಂ.35 ರಲ್ಲಿ 1 ಎಕರೆ 22 ಗುಂಟೆ ಜಮೀನು ಇರುತ್ತದೆ. ಆದರೆ ದೂರು ಅರ್ಜಿಯಲ್ಲಿ ತಿಳಿಸಿರುವಂತೆ ಹೆಂಡತಿ ರತ್ನಮ್ಮರವರಿಗೆ ಸರ್ವೆ ನಂ.41 ರಲ್ಲಿ 3 ಎಕರೆ ಇರುವ ಬಗ್ಗೆ, ರತ್ನಮ್ಮ ರವರಿಗೆ ಲಭ್ಯವಿರುವ ಪಹಣಿ ದಾಖಲೆಗಳನ್ನು ಪರಿಶೀಲಿಸಲಾಗಿ ಮಂಜೂರಾಗಿರುವ ಬಗ್ಗೆ ಮಾಹಿತಿ ಲಭ್ಯವಿರುವುದಿಲ್ಲ ಈ ಬಗ್ಗೆ ದೂರುದಾರರಲ್ಲಿ ಏನಾದರೂ ದಾಖಲೆ ಲಭ್ಯವಿದಲ್ಲಿ ನೀಡಿದರೆ ಪರಿಶೀಲಿಸಬಹುದಾಗಿರುತ್ತದೆ. ಮಂಜೂರಿದಾರ ವೀರಣ್ಣ ರವರು ತಮ್ಮ ಅಹವಾಲು ತಃಖ್ತೆಯಲ್ಲಿ ಸರ್ವೆ ನಂ.35 ರಲ್ಲಿ 1 ಎಕರೆ 22 ಗುಂಟೆ ಜಮೀನಿರುತ್ತದೆಂದು ತಿಳಿಸಿದ್ದು ಆದರೆ 15- 16ನೇ ಸಾಲಿನ ಗಣಕೀಕೃತ ಪಹಣಿ ಪರಿಶೀಲಿಸಲಾಗಿ ಸರ್ವೆ ನಂ.35 ರಲ್ಲಿ ವೀರಣ್ಣ ರವರ ಹೆಸರಿನಲ್ಲಿ 2 ಎಕರೆ 28 ಗುಂಟೆ ಇದ್ದು ಹಾಲಿ ಮಂಜೂರಾಗಿರುವ ಜಮೀನು 2 ಎಕರೆ 30 ಗುಂಟೆ ಒಟ್ಟಾರೆ 5 ಎಕರೆ 18 ಗುಂಟೆ ಜಮೀನು ಆಗಲಿದ್ದು ಇದರಿಂದ ಸರ್ಕಾರ ನಿಗದಿಪಡಿಸಿರುವ ಜಮೀನಿಗಿಂತ ಹೆಚ್ಚಿಗೆ ಜಮೀನು ಮಂಜೂರು ಮಾಡಿರುವುದು ವ್ಯಕ್ತವಾಗುತ್ತದೆ |

| | |
|---|---|
| ಉದಾ 4 | ರಾಜಶೇಖರಯ್ಯ ಬಿನ್ ಅಡವೀಶಯ್ಯ ಇವರಿಗೆ ಪಿತ್ರಾರ್ಜಿತವಾಗಿ ಸರ್ವೆ ನಂ.41/15 ರಲ್ಲಿ ಇವರ ತಂದೆಯ ಹೆಸರಿಗೆ 4 ಎಕರೆ ಹಾಗೂ ಸರ್ವೆ ನಂ.41/37 ರಲ್ಲಿ 3 ಎಕರೆ ಹಾಗೂ ಸರ್ವೆ ನಂ.41 ಬ್ಲಾಕ್ 55 ರಲ್ಲಿ ಇವರ ತಮ್ಮನಾದ ಶಿವಕುಮಾರಯ್ಯ ನವರಿಗೆ 1 ಎಕರೆ 20 ಗುಂಟೆ ಪಿತ್ರಾರ್ಜಿತ ಆಸ್ತಿ ಇದ್ದರೂ ಸಹಾ ಕಾನೂನನ್ನು ಗಾಳಿಗೆ ತೂರಿ ಸಾಗುವಳಿಯನ್ನು ನೀಡಿರುತ್ತಾರೆ |
| ಉತ್ತರ | ರಾಜಶೇಖರಯ್ಯ ಬಿನ್ ಅಡವೀಶಯ್ಯ ರವರಿಗೆ ಪ್ರಸ್ತಾವಿತ ಮಂಜೂರಾತಿಯಲ್ಲಿ 3 ಎಕರೆ 30 ಗುಂಟೆ ಜಮೀನು ಮಂಜೂರಾಗಿರುತ್ತದೆ. ಅಹವಾಲು ತಃಖ್ತೆಯಂತೆ ಇವರು ಪ್ರಸ್ತಾವಿತ ಜಮೀನು ಹೊರತುಪಡಿಸಿ ಬೇರೆ ಜಮೀನು ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಆದರೆ ದೂರು ಅರ್ಜಿಯಂತೆ ಇವರ ತಂದೆ ಅಡವೀಶಯ್ಯ ರವರಿಗೆ ಸ ನಂ.41/5 ರಲ್ಲಿ 4 ಎಕರೆ, ಸ ನಂ.41/37 ರಲ್ಲಿ 3 ಎಕರೆ ಮತ್ತು 41/55 ರಲ್ಲಿ ತಮ್ಮ ಶಿವಕುಮಾರ್ ರವರಿಗೆ 1 ಎಕರೆ 20 ಗುಂಟೆ ಜಮೀನು ಇದೆಯೇ ಎಂಬ ಬಗ್ಗೆ ಪಹಣಿ ದಾಖಲೆಗಳನ್ನು ಪರಿಶೀಲಿಸಲಾಗಿ ಸ ನಂ.41/15 ರಲ್ಲಿ ಅಡವೀಶಯ್ಯ ಬಿನ್ ಸೋಮಯ್ಯ 4 ಎಕರೆ ಸ ನಂ.41/37 ರಲ್ಲಿ ಅಡವೀಶಯ್ಯ ಬಿನ್ ಸೋಮಯ್ಯ 3 ಎಕರೆ. ಸ ನಂ.41/55 ರಲ್ಲಿ ಶಿವಕುಮಾರಯ್ಯ ಬಿನ್ ಅಡವೀಶಯ್ಯ 1 ಎಕರೆ 20 ಗುಂಟೆ ಜಮೀನು ಇದ್ದು, ಒಟ್ಟಾರೆ 8 ಎಕರೆ 20 ಗುಂಟೆ ಇವರ ಕುಟುಂಬದಲ್ಲಿ ಜಮೀನು ಇರುವುದಾಗಿ ಕಂಡುಬಂದಿದ್ದು, ಆದಾಗ್ಯೂ ಸಹ ರಾಜಶೇಖರಯ್ಯ ಬಿನ್ ಅಡವೀಶಯ್ಯ ರವರಿಗೆ 3 ಎಕರೆ 30 ಗುಂಟೆ ಜಮೀನು ಮಂಜೂರು ಮಾಡಿದ್ದು, ಸರ್ಕಾರ ನಿಗಧಿಪಡಿಸಿರುವ ಹೆಚ್ಚಾಗಿ ಜಮೀನು ಮಂಜೂರು ಮಾಡಿರುವುದು ಕಂಡುಬಂದಿರುತ್ತದೆ. |
| ಉದಾ 5 | ಯಶೋದಮ್ಮ ಕೋಂ ರುದ್ರಯ್ಯ ಇವರಿಗೆ 1 ಎಕರೆ 30 ಗುಂಟೆ ಸಾಗುವಳಿ ನೀಡಿದ್ದು ಇವರ ಗಂಡನ ಹೆಸರಿಗೆ ಸೋರೆಕುಂಟೆ ಗ್ರಾಮದ ಸರ್ವೆ ನಂ.65 ರಲ್ಲಿ 1 ಎಕರೆ 13 ಗುಂಟೆ ಹಾಗೂ 91/2ಬಿ ರಲ್ಲಿ 38 ಗುಂಟೆ, ಸ ನಂ.41/39 ರಲ್ಲಿ 4 ಎಕರೆ ಹಾಗೂ ಪುರುಡಗುಂಟೆ ಗ್ರಾಮದ ಸರ್ವೆ ನಂ.16 ರಲ್ಲಿ 2 ಎಕರೆ ಇದ್ದು ಇಷ್ಟೊಂದು ಆಸ್ತಿಯನ್ನು ಹೊಂದಿರುವ ಇವರಿಗೂ ಸಹಾ ಸಾಗುವಳಿ ಚೀಟಿಯನ್ನು ನೀಡಲಾಗಿದೆ. |
| ಉತ್ತರ | ಯಶೋದಮ್ಮ ಕೋಂ ರುದ್ರಯ್ಯ ರವರಿಗೆ ಹಾಲಿ ಮಂಜೂರಾತಿಯಲ್ಲಿ 1 ಎಕರೆ 30 ಗುಂಟೆ, ಜಮೀನು ಮಂಜೂರಾಗಿದ್ದು, ಇದರ ಅಹವಾಲು ತಃಖ್ತೆಯಲ್ಲಿ ಸರ್ವೆ ನಂ.65 ರಲ್ಲಿ 1 ಎಕರೆ 13 ಗುಂಟೆ, ಸರ್ವೆ ನಂ.94/14 ರಲ್ಲಿ 0.29 ಗುಂಟೆ ಒಟ್ಟು 2 ಎಕರೆ 02 ಗುಂಟೆ ಜಮೀನುದ್ದು ಇದಕ್ಕೆ 3ಜನ ಹಿಸ್ಸಾದಾರರಿದ್ದು ಇದರಲ್ಲಿ ತಮ್ಮ ಗಂಡನಿಗೆ 0.14 ಗುಂಟೆ ಜಮೀನು ಬರಬಹುದಾಗಿದ್ದು ಇದಲ್ಲದೆ ಬೇರೆ ಎಲ್ಲೂ ಜಮೀನು ಇರುವುದಿಲ್ಲವೆಂದು ತಮ್ಮ ಅಹವಾಲು ತಃಖ್ತೆಯಲ್ಲಿ ತಿಳಸಿದ್ದು, ಇವರ ಗಂಡ ರುದ್ರಯ್ಯ ರವರಿಗೆ ದೂರು ಅರ್ಜಿಯಲ್ಲಿನ ಸರ್ವೆ ನಂಗಳ ಬಗ್ಗೆ ಲಭ್ಯವಿರುವ ಪಹಣಿ ದಾಖಲೆಗಳನ್ನು ಪರಿಶೀಲಿಸಲಾಗಿ ಸರ್ವೆ ನಂ.65 ರಲ್ಲಿ 1 ಎಕರೆ 13 ಗುಂಟೆ, ಸರ್ವೆ ನಂ.91/2ಬಿ ರಲ್ಲಿ 0.38 ಗುಂಟೆ ಸರ್ವೆ ನಂ.94/14 ರಲ್ಲಿ 0.29 ಗುಂಟೆ, ಸರ್ವೆ ನಂ.41/39 ರಲ್ಲಿ 4 ಎಕರೆ ಪುರುಡಗುಂಟೆ ಸರ್ವೆ ನಂ.16 ರಲ್ಲಿ 2 ಎಕರೆ ಇರುವುದಿಲ್ಲ ಆದಾಗ್ಯೂ ಇವರ ಹೆಸರಿನಲ್ಲಿ ಒಟ್ಟಾರೆ 7 ಎಕರೆ ಜಮೀನು ಇದ್ದು ಆದಾಗ್ಯೂ ಇವರ ಹೆಂಡತಿ ಯಶೋದಮ್ಮ ಕೋಂ ರುದ್ರಯ್ಯ ರವರಿಗೆ ಹಾಲಿ 1 ಎಕರೆ 30 ಗುಂಟೆ ಜಮೀನು ಮಂಜೂರು ಮಾಡಿದ್ದು, ಸರ್ಕಾರ ನಿಗಧಿಪಡಿಸಲ್ಪಟ್ಟಿರುವ ಹೆಚ್ಚು ಜಮೀನು ಕುಟುಂಬದಲ್ಲಿ ಇದ್ದಾಗ್ಯೂ ಸಹ ಹೆಚ್ಚುವರಿಯಾಗಿ ಜಮೀನನ್ನು ಸರಿಯಾಗಿ ಪರಿಶೀಲನೆ ನಡೆಸದೆ ಮಂಜೂರು ಮಾಡಿರುವುದು ಕಂಡುಬಂದಿರುತ್ತದೆ. |

| | |
|---|---|
| ಉದಾ 6 | ದೊಡ್ಡಗಂಗಮ್ಮ ಕೋಂ ಓಬಳನರಸಿಂಹಯ್ಯ ಇವರ ಪತಿಯು ಶಿಕ್ಷಣ ಇಲಾಖೆಯಲ್ಲಿ ಶಿಕ್ಷಕರಾಗಿ ಕರ್ತವ್ಯ ನಿರ್ವಹಿಸುವಾಗ ಅಕಾಲಿಕ ಮರಣಕ್ಕೆ ತುತ್ತಾಗಿರುತ್ತಾರೆ. ಇವರ ಮಗನಾದ ರವೀಶ್‌ನಿಗೆ ಅನುಕಂಪದ ಆಧಾರದ ಮೇಲೆ ಸರ್ಕಾರಿ ಉದ್ಯೋಗವನ್ನು ನೀಡಿದ್ದು ಹಾಲಿ ಕಂದಾಯ ಇಲಾಖೆಯಲ್ಲಿ ಉಪ ತಹಶೀಲ್ದಾರಾಗಿ ತುಮಕೂರು ತಾಲ್ಲೂಕಿನಲ್ಲಿಯೇ ಕರ್ತವ್ಯ ನಿರ್ವಹಿಸುವ ಅವಧಿಯಲ್ಲಿಯೇ ಇವರ ತಾಯಿ ಹೆಸರಿಗೆ ಕಾನೂನುಬಾಹಿರವಾಗಿ ಸಾಗುವಳಿ ಚೀಟಿ ನೀಡಿರುತ್ತಾರೆ ಹಾಗೂ ಸದರಿಯವರಿಗೆ ಪಿತ್ರಾರ್ಜಿತ ಆಸ್ತಿ ಇರುವುದನ್ನು ಹಾಗೂ ಕೌಟುಂಬಿಕ ಪಿಂಚಣಿ ಪಡೆಯುತ್ತಿರುವುದನ್ನು ಮತ್ತು ಇನ್ನೊಬ್ಬ ಮಗನಾದ ದಿನೇಶ್ ಎಂಬುವವರು ಸೋರೆಕುಂಟೆ ಗ್ರಾಮ ಪಂಚಾಯ್ತಿಯಲ್ಲಿ ಬಿಲ್ ಕಲೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿರುವುದನ್ನು ಮತ್ತು ಇವರ ಕುಟುಂಬವು ಆರ್ಥಿಕವಾಗಿ ಬಲಿಷ್ಟವಾಗಿದ್ದರೂ ಸಹಾ ಸರ್ಕಾರದ ಸಾಗುವಳಿ ಚೀಟಿ ಮಂಜೂರಾತಿ ನಿಯಮವನ್ನು ಗಾಳಿಗೆ ತೂರಿ ಕಾನೂನಿನ ಕಣ್ಣಿಗೆ ಮಣ್ಣೆರಚಿ ಸಾಗುವಳಿ ಚೀಟಿಯನ್ನು ಪಡೆದಿರುತ್ತಾರೆ. |
| ವಿವರಣೆ | ಶ್ರೀಮತಿ ದೊಡ್ಡಗಂಗಮ್ಮ ಕೋಂ ಓಬಳನರಸಿಂಹಯ್ಯ ಹಾಲಿ ಮಂಜೂರಾತಿಯಲ್ಲಿ 2 ಎಕರೆ 30 ಗುಂಟೆ ಮಂಜೂರಿಯಾಗಿರುತ್ತದೆ. ಅಹವಾಲು ಪಟ್ಟಿಯಂತೆ ಸದರಿರವರಿಗೆ ಮಲ್ಲೇನಹಳ್ಳಿ ಗ್ರಾಮದ ಸರ್ವೆ ನಂ.20/2 ರಲ್ಲಿ 1 ಎಕರೆ 15 ಗುಂಟೆ ಜಮೀನಿದ್ದು, ಬೇರೆ ಎಲ್ಲೂ ಜಮೀನಿರುವುದಿಲ್ಲ ಎಂದು ತಿಳಿಸಿದ್ದು, ತಮ್ಮ ಅರ್ಜಿಯಲ್ಲಿ ವಾರ್ಷಿಕ ಆದಾಯ 6000/- ಎಂದು ತಿಳಿಸಿದ್ದು, ಮಂಜೂರಾತಿ ಕಡತ ಮಂಜೂರಾತಿ ಸಮಯಲ್ಲಿ 1,20,000/- ರೂ ಆದಾಯ ಇರುವುದಾಗಿ ನಮೂದಿಸಲಾಗಿರುತ್ತದೆ. ಬಗರ್ ಹುಕುಂ ಸಕ್ರಮೀಕರಣದಲ್ಲಿ ಫಲಾನುಭವಿಯ ಆದಾಯದ ಬಗ್ಗೆ ಆದಾಯವು ನಿಗಧಿತವಾಗಿ ಇರಬೇಕೆ/ ಇಲ್ಲವೇ ಎಂಬ ಬಗ್ಗೆ ಸರ್ಕಾರದಿಂದ ಸ್ಪಷ್ಟವಾದ ಸ್ಪಷ್ಟೀಕರಣದ ಅವಶ್ಯವಿದ್ದು ಅಲ್ಲದೆ ಮಂಜೂರಿದಾರರ ಪತಿಯು ಶಿಕ್ಷಣ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಇವರ ಮರಣದಿಂದ ಮಂಜೂರಿದಾರರು ಕುಟುಂಬ ಪಿಂಚಣಿ ಪಡೆಯುತ್ತಿದ್ದಾರೆಹಾಗೂ ಇವರ ಮಗ ರವೀಶ್ ರವರು ಅನುಕಂಪದ ಆಧಾರದ ಮೇಲೆ ಕಂದಾಯ ಇಲಾಖೆಯಲ್ಲಿ ಉಪತಹಶೀಲ್ದಾರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದು ಹಾಗೂ ಇವರ ಇನ್ನೊಬ್ಬ ಮಗ ದಿನೇಶ್ ಎಂಬುವವರು ಸೋರೆಕುಂಟೆ ಗ್ರಾಮ ಪಂಚಾಯಿತಿಯಲ್ಲಿ ಬಿಲ್ ಕಲೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದು ಮಂಜೂರಿದಾರರ ಆದಾಯಿತ ಬಗ್ಗೆ ಸರ್ಕಾರದಿಂದ ನಮೂನೆ 53 ರ ಅರ್ಜಿದಾರರಿಗೆ ವಾರ್ಷಿಕ ವರಮಾನ ನಿಗಧಿಪಡಿಸಿರುವ ಬಗ್ಗೆ ಸ್ಪಷ್ಟೀಕರಣ ಪಡೆದು ಮುಂದಿನ ಕ್ರಮವಹಿಸಬೇಕಾಗಿರುತ್ತದೆ |
| ಉದಾ 7 | ದೇವರಾಜು ಬಿನ್ ಸಿದ್ದಲಿಂಗಯ್ಯ ಇವರಿಗೆ 2 ಎಕರೆ 35 ಗುಂಟೆ ಸಾಗುವಳಿ ಚೀಟಿ ನೀಡಿದ್ದು ಈತ ಆದಾಯ ತೆರಿಗೆ ಪಾವತಿದಾರನಾಗಿದ್ದು ಹಾಗೂ ಈತನು ಲೇಬರ್ ಕಂಟ್ರಾಕ್ಟರ್ ಮಾಡುತ್ತಿದ್ದು ಸಂಜನಾ ಎಂಟರ್‌ಪ್ರೈಸಸ್ ಎಂಬ ಸಂಸ್ಥೆಯನ್ನು ಸಹಾ ಹೊಂದಿದ್ದು ಇವರು ಸ್ವಯಾರ್ಜಿತವಾಗಿ ಸರ್ವೆ ನಂ.25/5 ರಲ್ಲಿ ತಾಯಿಯ ಹೆಸರಿಗೆ ಅಂದರೆ ಸಿದ್ದಮ್ಮ ಕೋಂ ಸಿದ್ದಲಿಂಗಯ್ಯ ಇವರ ಹೆಸರಿಗೆ 2 ಎಕರೆ [illegible] ತನ್ನ ಹೆಸರಿಗೆ 30 ಗುಂಟೆ ಜಮೀನನ್ನು ಹೊಂದಿರುತ್ತಾರೆ |

| ವಿವರಣೆ | ದೇವರಾಜು ಬಿ.ಎಸ್ ಬಿನ್ ಸಿದ್ದಲಿಂಗಯ್ಯ ರವರಿಗೆ ಹಾಲಿ ಮಂಜೂರಾತಿಯಲ್ಲಿ 2 ಎಕರೆ 35 ಗುಂಟೆ ಜಮೀನು ಮಂಜೂರಾಗಿದ್ದು ತಮ್ಮ ಅಹವಾಲು ಅರ್ಜಿಯಲ್ಲಿ ಸರ್ವೆ ನಂ.41/21 ರಲ್ಲಿ 1 ಎಕರೆ 19 ಗುಂಟೆ ಜಮೀನಿದ್ದು ಬೇರೆ ಎಲ್ಲಿಯೂ ಜಮೀನಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆದರೆ ಕಡತದಲ್ಲಿ ಲಭ್ಯವಿರುವ ದಾನ ಪತ್ರದ ದಿ:05/07/2011 ರಂದು ದೇವರಾಜು ಬಿನ್ ಸಿದ್ದಲಿಂಗಯ್ಯ ಇವರು ಮತ್ತು ಇವರ ತಂದೆ ತಾಯಿಯಿಂದ ನಳಿನಾ ಕೋಂ ದೇವರಾಜು ರವರಿಗೆ ಅರಿಶಿನ ಕುಂಕುಮಕ್ಕಾಗಿ ದಾನ ನೀಡಿದ್ದು ಇದರಂತೆ 41/25 ರಲ್ಲಿ 1 ಎಕರೆ 19.08 ಗುಂಟೆ, ಸರ್ವೆ ನಂ.41/48 ರಲ್ಲಿ 0.18 ಗುಂಟೆ. ಒಟ್ಟಾರೆ 1 ಎಕರೆ 37.08 ಗುಂಟೆ ಜಮೀನನ್ನು ದಾನ ನೀಡಿದ್ದು ಉಳಿಕೆ ಸ ನಂ.65/2, 84/2, 94/3ಎ, 3/2 ಮತ್ತು 56 ಸರ್ವೆ ನಂಬರ್‌ಗಳಲ್ಲಿ ಒಟ್ಟು 2 ಎಕರೆ 06 ಗುಂಟೆ ಜಮೀನು ಮತ್ತು ಈಗಾಗಲೇ ದಾನ ಕೊಟ್ಟಿರುತ್ತಾರೆ. 1 ಎಕರೆ 37.08 ಗುಂಟೆ ಸೇರಿದರೆ ಒಟ್ಟಿಗೆ ಸರ್ಕಾರ ನಿಗದಿಪಡಿಸಿರುವ ಜಮೀನಿಗಿಂತ ಹೆಚ್ಚಿಗೆ ಜಮೀನು ಇರುವುದು ಕಂಡುಬರುತ್ತದೆ. ಅಲ್ಲದೆ ಇವರ ತಾಯಿ ಹೆಸರಿನಲ್ಲಿ ಸರ್ವೆ ನಂ.25/5 ರಲ್ಲಿ 2 ಎಕರೆ ಇವರ ಹೆಸರಿನಲ್ಲಿ 0.30 ಗುಂಟೆ ಜಮೀನು ಇರುವ ಬಗ್ಗೆ ಮತ್ತು ಜಮೀನು ಇರುವ ಬಗ್ಗೆ ಲಭ್ಯವಿರುವ 15-16ನೇ ಸಾಲಿನ ಪಹಣಿ ಪರಿಶೀಲಿಸಲಾಗಿ ತಾಯಿ ಸಿದ್ದಮ್ಮ ರವರ ಹೆಸರಿನಲ್ಲಾಗಲಿ ಮಂಜೂರಿದಾರ ದೇವರಾಜು ರವರ ಹೆಸರಿನಲ್ಲಿ ಜಮೀನು ಇರುವುದು ಕಂಡುಬರುವುದಿಲ್ಲ. ಇವರು ಆದಾಯ ತೆರಿಗೆದಾರರಾದರುವ ಬಗ್ಗೆ ಮಾಹಿತಿ ಪಡೆದು ಆದಾಯದ ಮಿತಿ ಬಗ್ಗೆ ಸರ್ಕಾರದ ಸ್ಪಷ್ಟೀಕರಣ ಪಡೆದು ಮುಂದಿನ ಕ್ರಮ ವಹಿಸಬಹುದಾಗಿರುತ್ತದೆ. |
|---|---|

ಮೇಲ್ಕಂಡಂತೆ ಹಾಗೂ ದಾಖಲೆಗಳ ಪರಿಶೀಲನೆಯಿಂದ ಈ ಕೆಳಕಂಡ ಲೋಪದೋಷಗಳು ಕಂಡು ಬಂದಿರುತ್ತದೆ.

1)ಮೊದಲನೇ ಸಭೆಯಲ್ಲಿ ಮಂಜೂರಾದ ನಂತರ ಮಂಜೂರಾತಿಯನ್ನು ಸ್ಥಿರೀಕರಣಮಾಡಲು ತಹಶೀಲ್ದಾರ್ ರವರು ತಮ್ಮ ಅಭಿಪ್ರಾಯ ನೀಡದೆ ನೇರವಾಗಿ ಅಧ್ಯಕ್ಷರು ಮತ್ತು ಸದಸ್ಯರು ಸ್ಥಿರೀಕರಿಸಿರುವುದಲ್ಲದೆ ಸದರಿ ಸ್ಥಿರೀಕರಣವನ್ನು ಸಭೆಯಲ್ಲಿ ಮಂಡಿಸದೆ ನೇರವಾಗಿ ಕಡತದಲ್ಲಿ ಪಡೆದು ಲೋಪವೆಸಗಲಾಗಿರುತ್ತದೆ

2)ದೂರಿನ ಉದಾಹರಣೆ 1 ರಲ್ಲಿ ದೊಡ್ಡಿರಪ್ಪ ಬಿನ್ ಹುಚ್ಚಯ್ಯ ರವರಿಗೆ 78-79 ನೇ ಸಾಲಿನಲ್ಲಿ ಜಮೀನು ಮಂಜೂರು ಆಗಿರುವ ಬಗ್ಗೆ ಮತ್ತು ಶಿವಣ್ಣ ಬಿನ್ ಹುಚ್ಚಯ್ಯ ರವರಿಗೆ 78-79 ನೇ ಸಾಲಿನಲ್ಲಿ 2-00 ಎಕರೆ ಜಮೀನು ಮಂಜೂರು ಆಗಿರುವ ಬಗ್ಗೆ ಪರಿಶೀಲನೆ ನಡೆಸಲು ಮೂಲ ಮಂಜೂರಾತಿ ಕಡತಗಳು ಲಭ್ಯವಿರುವುದಿಲ್ಲ.

3) ದೂರಿನ ಉದಾಹರಣೆ 3 ರಲ್ಲಿ ವೀರಣ್ಣ ಬಿನ್ ಹಾಳೇಗೌಡ ರವರಿಗೆ 2-28 ಗುಂಟೆ ಜಮೀನು ಇದೆ. ಇದರ ಜೊತೆಗೆ ಇದೀಗ 2-30 ಗುಂಟೆ ಜಮೀನು ಮಂಜೂರು ಮಾಡಿದ್ದು, ಇದರಿಂದ ಸರ್ಕಾರ ನಿಗದಿಪಡಿಸಿರುವ ಜಮೀನಿಗಿಂತ ಹೆಚ್ಚಿಗೆ ಜಮೀನು ಮಂಜೂರು ಮಾಡಿ ಕರ್ತವ್ಯ ಲೋಪ ಮಾಡಲಾಗಿರುತ್ತದೆ

4) ಮೂರಿನ ಉದಾಹರಣೆ 4 ರಂತೆ ರಾಜಶೇಖರಯ್ಯ ಬಿನ್ ಅಡವೀಶಯ್ಯ ರವರ ಒಟ್ಟು ಕುಟುಂಬದ ಆಸ್ತಿ 8-20 ಗುಂಟೆ ಇದ್ದು, ಆದಾಗ್ಯೂ ಸಹ 3-30 ಗುಂಟೆ ಜಮೀನು ಇದೀಗ ಮಂಜೂರು ಮಾಡಿದ್ದು, ಸರ್ಕಾರ ನಿಗದಿಪಡಿಸಿರುವ ಜಮೀನಿಗಿಂತ ಹೆಚ್ಚಿಗೆ ಜಮೀನು ಮಂಜೂರು ಮಾಡಿ ಕರ್ತವ್ಯ ಲೋಪ ಮಾಡಲಾಗಿರುತ್ತದೆ.

5) ದೂರಿನ ಉದಾಹರಣೆ 5 ರಂತೆ ರುದ್ರಯ್ಯರವರ ಹೆಸರಿನಲ್ಲಿ 7-00 ಎಕರೆ ಜಮೀನು ಇದ್ದಾಗ್ಯೂ ಸಹ ಇವರ ಹೆಂಡತಿ ಯಶೋದಮ್ಮ ಕೋಂ ರುದ್ರಯ್ಯ ರವರಿಗೆ 1-30ಗುಂಟೆ ಜಮೀನು ಇದೀಗ ಮಂಜೂರು ಮಾಡಿ ಸರ್ಕಾರ ನಿಗಧಿಪಡಿಸಿರುವ ಜಮೀನಿಗಿಂತ ಹೆಚ್ಚಿಗೆ ಜಮೀನು ಮಂಜೂರು ಮಾಡಿ ಕರ್ತವ್ಯ ಲೋಪ ಮಾಡಲಾಗಿರುತ್ತದೆ.

6) ದೂರಿನ ಉದಾಹರಣೆ 6 ರಂತೆ ದೊಡ್ಡಗಂಗಮ್ಮ ಕೋಂ ಓಬಳನರಸಿಂಹಯ್ಯ ರವರ ವಾರ್ಷಿಕ ಆದಾಯ 120000/- ಎಂದು ನಮೂದಿಸಿದ್ದು, ಇವರು ಕುಟುಂಬ ಪಿಂಚಣಿ ಪಡೆಯುತ್ತಿದ್ದು, ಇವರ ಮಕ್ಕಳು ಸರ್ಕಾರಿ ನೌಕರಿಯಲ್ಲಿದ್ದರೂ ಸಹ ಜಮೀನು ಮಂಜೂರಾತಿ ನೀಡಿದ್ದು, ಮಂಜೂರಿದಾರರ ಆದಾಯದ ಬಗ್ಗೆ ಸರ್ಕಾರದಿಂದ ಸ್ಪಷ್ಟೀಕರಣ ಪಡೆದು ಮುಂದಿನ ಕ್ರಮ ವಹಿಸಬೇಕಾಗಿರುತ್ತದೆ.

7) ದೂರಿನ ಉದಾಹರಣೆ 7 ರಂತೆ ದೇವರಾಜು ರವರು ಲೇಬರ್ ಕಂಟ್ರಾಕ್ಟರ್ ಆಗಿದ್ದು ಇವರ ಕುಟುಂಬದ ಆಸ್ತಿ ಸರ್ಕಾರ ನಿಗಧಿಪಡಿಸಿರುವ ಜಮೀನಿಗಿಂತ ಹೆಚ್ಚಿಗೆ ಇದ್ದು, ಆದಾಗ್ಯೂ ಇವರಿಗೆ ಜಮೀನು ಮಂಜೂರು ಮಾಡಿದ್ದು, ಇವರು ಆದಾಯ ತೆರಿಗೆದಾರರು ಎಂಬ ಬಗ್ಗೆ ಆದಾಯ ತೆರಿಗೆ ಇಲಾಖೆಯಿಂದ ಮಾಹಿತಿ ಪಡೆದು ಆದಾಯದ ಮಿತಿ ಬಗ್ಗೆ ಸರ್ಕಾರದಿಂದ ಸ್ಪಷ್ಟೀಕರಣ ಪಡೆದು ಮುಂದಿನ ಕ್ರಮ ವಹಿಸಬೇಕಾಗಿರುತ್ತದೆ.

ಮಂಜೂರಾತಿ ನೀಡಿದ ನಂತರ ಸದರಿ ಮಂಜೂರಾತಿಯನ್ನು ಸ್ಥಿರೀಕರಣಗೊಳಿಸಿ ಸರ್ಕಾರದ ಆದೇಶ ಸಂಖ್ಯೆ ಆರ್ ಡಿ 35/ಎಲ್ ಜಿಪಿ 2018 ದಿನಾಂಕ 07-02-2018 ರ ಪತ್ರವನ್ನು ಆಧರಿಸಿ ಮಂಜೂರಿದಾರರ ಮಂಜೂರಾತಿಯಂತೆ ಪರಿಶೀಲನಾ ದೃಢಿಕರಣವನ್ನು ಉಪವಿಭಾಗಾಧಿಕಾರಿಗಳು ನೀಡಲಾಗಿದ್ದು, ಸದರಿ ದೃಢಿಕರಣದಲ್ಲಿ ಸರ್ಕಾರ ಚಾಲ್ತಿ ನಿಯಮಾವಳಿಗಳಿಗೆ ಬದ್ಧವಾಗಿದ್ದು, ಯಾವುದೇ ಮಂಜೂರಾತಿ ನಿಯಮಗಳ ಪಾಲನೆಯ ಲೋಪವಾದಲ್ಲಿ ಮಂಜುರಾತಿ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳಾದ ತಹಶೀಲ್ದಾರ್ ತುಮಕೂರು ತಾಲ್ಲೂಕು ರವರೇ ಜವಾಬ್ದಾರರು ಎಂದು ಷರತ್ತು ವಿಧಿಸಿ ಪರಿಶೀಲನಾ ದೃಢೀಕರಣ ನೀಡಲಾಗಿದ್ದು, ಆದರೆ ಈ ಬಗ್ಗೆ ಹಾಲಿ ತಹಶೀಲ್ದಾರ್ ಶ್ರೀ ಕೆ.ಆರ್ ನಾಗರಾಜು ರವರು ಫಲಾನುಭವಿಗಳ ಲಭ್ಯವಿರುವ ಜಮೀನಿನ ಬಗ್ಗೆ ಸರಿಯಾಗಿ ಪರಿಶೀಲನಾ ವರದಿ ಪಡೆಯದೇ ಹಾಗೂ ಚುನಾವಣಾ ನೀತಿ ಸಂಹಿತೆ ಜಾರಿಗೆ ಬರುವ ಮುನ್ನ ದಿನಾಂಕ 23-02-2019 ರಂದು ಸಾಗುವಳಿ ಚೀಟಿಗಳಿಗೆ ಸಹಿ ಮಾಡಿ ವಿತರಿಸಿ ಕರ್ತವ್ಯ ಲೋಪವೆಸಗಿರುವುದು ಕಂಡುಬಂದಿರುತ್ತದೆ.

ಮೇಲ್ಕಂಡಂತೆ ಕಂಡುಬಂದಿರುವ ಲೋಪದೋಷಗಳ ನೆಲೆಯಲ್ಲಿ ಒಟ್ಟಾರೆಯಾಗಿ ಮಂಜೂರಾತಿ ಸಮಯದಲ್ಲಿ ಫಲಾನುಭವಿಗಳ ಮಾಹಿತಿಯನ್ನು ಸರಿಯಾಗಿ ಪರಿಶೀಲಿಸಿ ಸ್ಪಷ್ಟ ಅಭಿಪ್ರಾಯ ಪಡೆಯದೆ ಮಂಜೂರಾತಿ ನೀಡಿರುವುದು ಲೋಪವಾಗಿರುತ್ತದೆ. ಈ ಬಗ್ಗೆ ಈ ಸಮಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ತಾಲ್ಲೂಕು ಕಛೇರಿಯ ಬಗರ್ ಹುಕುಂ ಸಾಗುವಳಿ ವಿಷಯ ನಿರ್ವಾಹಕರು, ಶಿರಸ್ತೇದಾರ್, [illegible] ಸಂಬಂಧಪಟ್ಟ ಗ್ರಾಮಲೆಕ್ಕಿಗರು, ರಾಜಸ್ವ ನಿರೀಕ್ಷಕರು ಮತ್ತು ತಹಶೀಲ್ದಾರ್ ರವರ [illegible] ಜರುಗಿಸಬಹುದಾಗಿರುತ್ತದೆ ಎಂದು ತನಿಖಾ ತಂಡವು ಅಭಿಪ್ರಾಯಪಟ್ಟಿರುತ್ತದೆ.

ಸದರಿ ತಂಡದ ವರದಿಯನ್ನು ಪರಿಶೀಲಿಸಿದ್ದು, ಶ್ರೀ ಕೆ.ಆರ್ ನಾಗರಾಜು, ತಹಶೀಲ್ದಾರ್, ತುಮಕೂರು ತಾಲ್ಲೂಕು ಇವರು ನಿಯಮಬಾಹಿರವಾಗಿ ಮಂಜೂರಾತಿ ಸಮಯದಲ್ಲಿ ಫಲಾನುಭವಿಗಳ ದಾಖಲೆಯನ್ನು ಸರಿಯಾಗಿ ಪರಿಶೀಲಿಸದೆ ಸಾಗುವಳಿ ಚೀಟಿ ನೀಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿಯವರ ವಿರುದ್ಧ ಶಿಸ್ತುಕ್ರಮಕ್ಕೆಗೊಳ್ಳಲು ಕೋರಿದೆ (ತನಿಖಾ ತಂಡದ ವರದಿಯ ಪ್ರತಿಯನ್ನು ಈ ಪತ್ರಕ್ಕೆ ಲಗತ್ತಿಸಿ ಕಳುಹಿಸಿದೆ)

ತಮ್ಮ ನಂಬುಗೆಯ,

(ಡಾ. ಕೆ. ರಾಕೇಶ್ ಕುಮಾರ್)
ಜಿಲ್ಲಾಧಿಕಾರಿ,
ತುಮಕೂರು ಜಿಲ್ಲೆ

ಸಂಖ್ಯೆ: ಕಂದಾಯ ಸಿಬ್ಬಂದಿ ಸಿಆರ್ 33/2019-20

ಜಿಲ್ಲಾಧಿಕಾರಿಗಳ ಕಾರ್ಯಾಲಯ
ತುಮಕೂರು ಜಿಲ್ಲೆ, ತುಮಕೂರು
ದಿನಾಂಕ: 10-08-2020

ಉಪವಿಭಾಗಾಧಿಕಾರಿಗಳು,
ತುಮಕೂರು ಉಪವಿಭಾಗ,
ತುಮಕೂರು

ಮಾನ್ಯರೆ,

ವಿಷಯ: ಕೆ.ಆರ್ ನಾಗರಾಜ ಹಿಂದಿನ ತಹಶೀಲ್ದಾರ್, ತುಮಕೂರು ತಾಲ್ಲೂಕು ಹಾಗೂ ಇತರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಅನುಬಂಧ 1 ರಿಂದ 4 ರವರಗೆ ಆರೋಪ ಪಟ್ಟಿ ಸಿದ್ದಪಡಿಸಿ ಸಲ್ಲಿಸುವ ಬಗ್ಗೆ.

ಉಲ್ಲೇಖ: ಈ ಕಛೇರಿಯ ಸಮ ಸಂಖ್ಯೆ ಪತ್ರದ ದಿನಾಂಕ 20-07-2019 ಮತ್ತು 02-02-2020

2. ನಿಮ್ಮ ಕಛೇರಿಯ ಪತ್ರದ ಸಂ. ಸಿಬ್ಬಂದಿ ಸಿಆರ್ 51/2019-20 ದಿ 30-09-2019

*********

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ತುಮಕೂರು ತಾಲ್ಲೂಕು ಬೆಳ್ಳಾವಿ ಹೋಬಳಿ, ಸೂರಕುಂಟೆ ಗ್ರಾಮದ ಸನಂ 41 ರಲ್ಲಿ 44 ಜನರಿಗೆ ಕಾನೂನು ಬಾಹಿರವಾಗಿ ಸಾಗುವಳಿ ಚೀಟಿ ನೀಡಿದ ಅಧಿಕಾರಿ/ ನೌಕರರ ವಿರುದ್ಧ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಅನುಬಂಧ 1 ರಿಂದ 4 ರವರಗೆ ಆರೋಪ ಪಟ್ಟಿ ಸಿದ್ದಪಡಿಸಿ ಸಲ್ಲಿಸುವಂತೆ ಕೋರಲಾಗಿತ್ತು. ಉಲ್ಲೇಖ (2) ರ ನಿಮ್ಮ ಕಛೇರಿ ಪತ್ರದಲ್ಲಿ ವಿಷಯ ನಿರ್ವಾಹಕರು, ಶಿರಸ್ತೇದಾರರು, ರಾಜಸ್ವ ನಿರೀಕ್ಷಕರು ಮತ್ತು ಗ್ರಾಮ ಲೆಕ್ಕಿಗರ ವಿರುದ್ಧ ಮಾತ್ರ ದೋಷಾರೋಪಣಾ ಪಟ್ಟಿ ಅನುಬಂದ 1ರಿಂದ 4 ರವರಗೆ ಸಿದ್ಧಪಡಿಸಿ ಈ ಕಛೇರಿಗೆ ಸಲ್ಲಿಸಿರುವುದು ಸರಿಯಷ್ಟೆ. ಸದರಿ ತನಿಖಾ ವರದಿಯಂತೆ ಸಂಬಂಧಿಸಿದ ತಹಶೀಲ್ದಾರರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಸಲುವಾಗಿ ಅನುಬಂಧ 1 ರಿಂದ 4 ರವರಗಿನ ದೋಷಾರೋಪಣಾ ಪಟ್ಟಿ ತುರ್ತಾಗಿ ಸಲ್ಲಿಸಲು ದಿ 02-02-2020 ರ ಪತ್ರದಲ್ಲಿ ಕೋರಲಾಗಿತ್ತು.

ಆದರ ಇದುವರಗೂ ಸದರಿ ಮಾಹಿತಿಯನ್ನು ವರದಿಯೊಂದಿಗೆ ನೀಡಿರುವುದಿಲ್ಲ. ಈ ಕುರಿತು ಸರ್ಕಾರಕ್ಕೆ ಅಗತ್ಯ ಕ್ರಮಕ್ಕಾಗಿ ಸಲ್ಲಿಸಲು ಬಾಕಿ ಇರುತ್ತದ. ಆದ್ದರಿಂದ ಸದರಿ ಪ್ರಕರಣದಲ್ಲಿ ಬಾಗಿಯಾಗಿರುವ ಅಧಿಕಾರಿ / ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಸಲುವಾಗಿ ಅನುಬಂಧ 1 ರಿಂದ 4 ರವರಗಿನ ದೋಷಾರೋಪಣಾ ಪಟ್ಟಿ ತುರ್ತಾಗಿ ಸಲ್ಲಿಸಲು ಮತ್ತೋಮ್ಮೆ ಕೋರಿದ

ನಿಮ್ಮ ವಿಶ್ವಾಸಿ

(ಸಹಿ)

ಅಪರ ಜಿಲ್ಲಾಧಿಕಾರಿ,
ತುಮಕೂರು ಜಿಲ್ಲೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 346 |
| ಉತ್ತರಿಸುವ ದಿನಾಂಕ | 21-09-2020 |
| ಮಾನ್ಯ ಸದಸ್ಯರ ಹೆಸರು | ಶ್ರೀ ನಂಜೇಗೌಡ ಕೆ.ವೈ. (ಮಾಲೂರು) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಭೂ ನೋಂದಣೆ ಮೌಲ್ಯ ಮತ್ತು ಶುಲ್ಕವನ್ನು ಯಾವ ಆಧಾರದ ಮೇಲೆ ನಿರ್ಧಾರ ಮಾಡಲಾಗುವುದು; (ಮೌಲ್ಯ ಮತ್ತು ಶುಲ್ಕದ ದರ ಪಟ್ಟಿಯ ಜಿಲ್ಲಾವಾರು ಹಾಗೂ ತಾಲ್ಲೂಕುವಾರು ಮಾಹಿತಿಯನ್ನು ವಿವರ ನೀಡುವುದು) | ಕರ್ನಾಟಕ ಮುದ್ರಾಂಕ ಅಧಿನಿಯಮ, 1957ರ ಕಲಂ 45(ಬಿ)ರಡಿ ರಚಿಸಿರುವ The Karnataka Stamp [Constitution of Central Valuation Committee for estimation, Publication and Revision of Market value Guidelines of properties] Rules 2003ರ ನಿಯಮ 5, 6 ಮತ್ತು 7ರಲ್ಲಿ ಸೂಚಿಸಿರುವಂತೆ ಕೇಂದ್ರ ಮೌಲ್ಯಮಾಪನ ಸಮಿತಿ ಮತ್ತು ತಾಲ್ಲೂಕು ಮೌಲ್ಯಮಾಪನ ಉಪಸಮಿತಿಗಳು ಸ್ಥಿರಾಸ್ತಿಗಳ [ವಸತಿ, ವಾಣಿಜ್ಯ, ಕೈಗಾರಿಕೆ ನಿವೇಶನಗಳ, ಕೃಷಿ ಜಮೀನು ಹಾಗೂ ಇತರೆ] ಸರಾಸರಿ ಅಂದಾಜು ಮಾರುಕಟ್ಟೆ ಮೌಲ್ಯಗಳ ಮಾರ್ಗಸೂಚಿಗಳನ್ನು ಆಯಾ ಪ್ರದೇಶಕ್ಕೆ/ರಸ್ತೆ/ಬಡಾವಣೆ/ವಾರ್ಡ್‌ವಾರು ಬರುವ ಗ್ರಾಮ ಹಾಗೂ ಸ್ಥಳೀಯ ಸಂಸ್ಥೆ ವ್ಯಾಪ್ತಿಯಲ್ಲಿರುವ ಎಲ್ಲಾ ವಿವಿಧ ರೀತಿಯ ಸ್ಥಿರಾಸ್ತಿಗಳಲ್ಲಿ ನೋಂದಣೆ ಆಗಿರುವ ದಸ್ತಾವೇಜುಗಳ ಮಾರಾಟ ಅಂಕಿ ಅಂಶಗಳನ್ನು ಕ್ರೋಢಿಕರಿಸಿ, ಅದರ ಆಧಾರದ ಮೇಲೆ ಸರಾಸರಿ ಅಂದಾಜು ಮಾರುಕಟ್ಟೆ ಮೌಲ್ಯಗಳ ಮಾರ್ಗಸೂಚಿ ದರಗಳನ್ನು ಉಪಸಮಿತಿ ಸಭೆಯಲ್ಲಿ ಮಂಡಿಸಿ, ಸಾರ್ವಜನಿಕ ಆಕ್ಷೇಪಣೆ/ ಸಲಹೆಗಳನ್ನು ತಾತ್ಕಾಲಿಕ ಅಧಿಸೂಚನೆ ಹೊರಡಿಸಿ ನಿಗದಿತ 15 ದಿನಗಳ ಕಾಲವಕಾಶ ನೀಡಿ ಸ್ವೀಕೃತವಾದ ಆಕ್ಷೇಪಣೆಗಳ ಬಗ್ಗೆ ಉಪಸಮಿತಿಯಲ್ಲಿ ತೀರ್ಮಾನ ಕೈಗೊಂಡು ಪ್ರಸ್ತಾವನೆಯನ್ನು ಅಂತಿಮವಾಗಿ ಕೇಂದ್ರ ಮೌಲ್ಯ ಮಾಪನ ಸಮಿತಿಯ ಅನುಮೋದನೆಯನ್ನು ಪಡೆದು ಆಯಾ ಉಪಸಮಿತಿಗಳಲ್ಲಿ ಅಧಿಸೂಚನೆ ಹೊರಡಿಸಿ ಜಾರಿಗೊಳಿಸಲಾಗುತ್ತದೆ. ಜಿಲ್ಲಾವಾರು ಮತ್ತು ತಾಲ್ಲೂಕುವಾರು ಮಾರ್ಗಸೂಚಿ ದರಗಳ ಪಟ್ಟಿಯ ಮಾಹಿತಿಯನ್ನು ಅನುಬಂಧ-1ರಲ್ಲಿ (ಸಿ.ಡಿ.) ಸಲ್ಲಿಸಿದೆ. |
| ಆ) | ಅತಿ ಹೆಚ್ಚಿನ ಭೂ ನೋಂದಣೆ ಮೌಲ್ಯದ ಆದಾಯ ಮತ್ತು ಕಡಿಮೆ ಆದಾಯ ತರುವ ಜಿಲ್ಲೆಗಳು ಯಾವುವು; (ಜಿಲ್ಲಾವಾರು ಮಾಹಿತಿ ನೀಡುವುದು) | 2020-21ನೇ ಸಾಲಿನ ಏಪ್ರಿಲ್ ರಿಂದ ಜುಲೈ ವರೆಗಿನ ಜಿಲ್ಲಾವಾರು ಆದಾಯದ ಮಾಹಿತಿಯನ್ನು ಅನುಬಂಧ-2ರಲ್ಲಿ ಸಲ್ಲಿಸಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | ರಾಜ್ಯದಲ್ಲಿ ಈಗಲೂ ಸಹ ಭೂ ನೋಂದಣಾಧಿಕಾರಿಗಳ ಕಛೇರಿಯಲ್ಲಿ ಮಧ್ಯವರ್ತಿಗಳ ಹಾವಳಿ ಜಾಸ್ತಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿದೆ. |
| ಈ) | ಬಂದಿದ್ದಲ್ಲಿ, ಇದರಿಂದಾಗಿ ಸಾಮಾನ್ಯ ರೈತರು ನೇರವಾಗಿ ಭೂ ನೋಂದಣಿ ಮಾಡಲು ಸಾಧ್ಯವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿದೆ.<br>ಸಾಮಾನ್ಯ ರೈತರು ನೇರವಾಗಿ ಉಪ ನೋಂದಣಿ ಕಛೇರಿಗಳಲ್ಲಿ ಉಪ ನೋಂದಣಾಧಿಕಾರಿಗಳ ಮಾರ್ಗದರ್ಶನ ಪಡೆದು, ಖುದ್ದಾಗಿ ರೈತರು ದಸ್ತಾವೇಜನ್ನು ಸಿದ್ಧಪಡಿಸಿಕೊಂಡು ನೋಂದಾಯಿಸಬಹುದಾಗಿರುತ್ತದೆ ಮತ್ತು Karnataka Registration (Deed Writers Licence) Rules, 1979ರನ್ವಯ ಪರವಾನಿಗೆ ಪಡೆದ ದಸ್ತಾವೇಜು ಬರಹಗಾರರ ಮುಖಾಂತರ ಅಥವಾ ವಕೀಲರ ಮೂಲಕ ದಸ್ತಾವೇಜುಗಳನ್ನು ಸಿದ್ದಪಡಿಸಿಕೊಂಡು, ರೈತರೇ ಸ್ವತಃ ಅಂತಹ ದಸ್ತಾವೇಜುಗಳನ್ನು ಮಧ್ಯವರ್ತಿಗಳನ್ನು ಬಳಸದೇ ನೇರವಾಗಿ ಉಪ ನೋಂದಣಾಧಿಕಾರಿಗಳಿಗೆ ಸಲ್ಲಿಸಿ ನೋಂದಾಯಿಸಬಹುದಾಗಿದೆ. |
| ಉ) | ಹಾಗಿದ್ದಲ್ಲಿ, ಈ ಎಲ್ಲಾ ಭೂ ನೋಂದಣಿಯು ಮಧ್ಯವರ್ತಿಗಳ ಮೂಲಕ ನಡೆಯುತ್ತಿರುವುದನ್ನು ತಪ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು). | ಇಲಾಖೆಯು ನವೆಂಬರ್ 2018 ರಿಂದ ಕಾವೇರಿ ಆನ್‌ಲೈನ್ ಸೇವೆಗಳನ್ನು ಜಾರಿಗೆ ತಂದಿದ್ದು, ಸಾರ್ವಜನಿಕರು ನೋಂದಣಿ ಪೂರ್ವ ಡೇಟಾ ಎಂಟ್ರಿ (PRDE) ಮಾಡಿ, ಆನ್‌ಲೈನ್ ಮೂಲಕ ಶುಲ್ಕಗಳನ್ನು ಪಾವತಿಸಿ ದಸ್ತಾವೇಜಿನ ನೋಂದಣಿಗೆ ಮುಂಗಡ ಸಮಯ ನಿಗದಿಪಡಿಸಿಕೊಂಡು, ದಸ್ತಾವೇಜುಗಳನ್ನು ನೋಂದಣಿಗೆ ಹಾಜರುಪಡಿಸುವ ಸೌಲಭ್ಯವನ್ನು ಕಲ್ಪಿಸಲಾಗಿದೆ.<br>ಸಾಮಾನ್ಯ ರೈತರು ಹೆಚ್ಚಾಗಿ ಕೃಷಿ ಸಾಲಕ್ಕೆ ಸಂಬಂಧಿಸಿದ ಆಧಾರ ಪತ್ರಗಳನ್ನು ಉಪ ನೋಂದಣಿ ಕಛೇರಿಗಳಲ್ಲಿ ಖುದ್ದಾಗಿ ಹಾಜರಾಗಿ ನೋಂದಾಯಿಸಿಕೊಳ್ಳುತ್ತಿದ್ದು, ಇಂತಹ ಸಂದರ್ಭದಲ್ಲಿ ಮಧ್ಯವರ್ತಿಗಳನ್ನು ಅವಲಂಭಿಸುವುದನ್ನು ತಪ್ಪಿಸಲು ಇಲಾಖೆಯು KACOMP [The Karnataka Agricultural Credit Operations and Miscellaneous Provisions Act] ಅಧಿನಿಯಮದಡಿಯಲ್ಲಿ ರೈತರಿಗೆ ನೀಡುವ ಕೃಷಿ ಸಾಲಕ್ಕೆ ಸಂಬಂಧಿಸಿದ ಡಿಕ್ಲರೇಷನ್ ಮತ್ತು ಸಾಲ ತೀರುವಳಿ ಪತ್ರಗಳನ್ನು ಆನ್‌ಲೈನ್ ಮೂಲಕ ಫೈಲಿಂಗ್ ಮಾಡುವ ಸೌಲಭ್ಯವನ್ನು ಬ್ಯಾಂಕ್‌ಗಳು ಮತ್ತು ಇತರೇ ಹಣಕಾಸು ಸಂಸ್ಥೆಗಳಿಗೆ ಇಲಾಖೆಯ ಕಾವೇರಿ ಆನ್‌ಲೈನ್ ಸೇವೆಗಳ ಮೂಲಕ ಒದಗಿಸಲಾಗಿದೆ. |

ಸಂಖ್ಯೆ: ಕಂಇ/156/ಎಂಎನ್‌ಎಸ್‌ಎ/2020

(ಆರ್.ಅಶೋಕ್)
ಕಂದಾಯ ಸಚಿವರು

## ಅನುಬಂಧ–2

2020–21ನೇ ಸಾಲಿನ ಏಪ್ರಿಲ್ ರಿಂದ ಜುಲೈವರೆಗೆ ಜಿಲ್ಲಾವಾರು ಸಂಗ್ರಹಿಸಿರುವ ರಾಜಸ್ವದ ವಿವರ

| ಕ್ರ. ಸಂ. | ಜಿಲ್ಲಾ ನೋಂದಣಿ ಕಛೇರಿಯ ಹೆಸರು | ಸಂಗ್ರಹವಾದ ಮುದ್ರಾಂಕ ಮತ್ತು ನೋಂದಣಿ ಶುಲ್ಕ (ರೂ.ಕೋಟಿಗಳಲ್ಲಿ) |
|---|---|---|
| 1 | ಶಿವಾಜಿನಗರ | 356.91 |
| 2 | ಜಯನಗರ | 235.37 |
| 3 | ಬಸವನಗುಡಿ | 170.76 |
| 4 | ರಾಜಾಜಿನಗರ | 169.61 |
| 5 | ಗಾಂಧಿನಗರ | 145.91 |
| 6 | ಬಳ್ಳಾರಿ | 103.59 |
| 7 | ಮೈಸೂರು | 95.09 |
| 8 | ಬೆಂಗಳೂರು ಗ್ರಾಮಾಂತರ | 84.76 |
| 9 | ಬೆಳಗಾವಿ | 46.56 |
| 10 | ಧಾರವಾಡ | 35.99 |
| 11 | ಮಂಗಳೂರು (ದ.ಕ) | 34.38 |
| 12 | ತುಮಕೂರು | 32.63 |
| 13 | ರಾಮನಗರ | 25.32 |
| 14 | ಕೋಲಾರ | 24.86 |
| 15 | ಕಲಬುರಗಿ | 24.75 |
| 16 | ದಾವಣಗೆರೆ | 23.97 |
| 17 | ಹಾಸನ | 23.71 |
| 18 | ಶಿವಮೊಗ್ಗ | 23.43 |
| 19 | ಬಾಗಲಕೋಟೆ | 22.10 |
| 20 | ಚಿತ್ರದುರ್ಗ | 18.82 |
| 21 | ಉಡುಪಿ | 17.94 |
| 22 | ವಿಜಾಪುರ | 17.80 |
| 23 | ಚಿಕ್ಕಮಗಳೂರು | 17.76 |
| 24 | ರಾಯಚೂರು | 17.28 |
| 25 | ಮಂಡ್ಯ | 16.80 |
| 26 | ಕೊಪ್ಪಳ | 14.26 |
| 27 | ಚಿಕ್ಕಬಳ್ಳಾಪುರ | 14.20 |
| 28 | ಬೀದರ್ | 12.10 |
| 29 | ಗದಗ | 11.03 |
| 30 | ಹಾವೇರಿ | 9.64 |
| 31 | ಯಾದಗಿರಿ | 9.13 |
| 32 | ಕಾರವಾರ | 6.88 |
| 33 | ಕೊಡಗು | 6.53 |
| 34 | ಚಾಮರಾಜನಗರ | 5.56 |
|  | ಒಟ್ಟು ಮೊತ್ತ | 1875.47 |

*–*–*

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 348

2) ಸದಸ್ಯರ ಹೆಸರು : ಶ್ರೀ ನಂಜೇಗೌಡ ಕ.ವೈ. (ಮಾಲೂರು)

3) ಉತ್ತರಿಸುವ ದಿನಾಂಕ : 21-09-2020

4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಲ್ಲಿ ಮೀನುಗಾರಿಕೆ ಇಲಾಖೆಯಿಂದ ಕೆರೆಗಳಲ್ಲಿ / ಡ್ಯಾಂ / ಕಟ್ಟೆಗಳಲ್ಲಿ ಮೀನು ಸಾಕಾಣಿಕೆಗಾಗಿ ನೀಡಿರುವ ಅನುದಾನವೆಷ್ಟು (ವರ್ಷವಾರು, ಜಿಲ್ಲಾವಾರು ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ಮೀನುಗಾರಿಕೆ ಇಲಾಖೆಯಿಂದ ಕೆರೆಗಳಲ್ಲಿ / ಡ್ಯಾಂ / ಕಟ್ಟೆಗಳಲ್ಲಿ ಮೀನು ಸಾಕಾಣಿಕೆಗಾಗಿ ನೀಡಿರುವ ಅನುದಾನದ ವರ್ಷವಾರು, ಜಿಲ್ಲಾವಾರು ಮಾಹಿತಿಗಳನ್ನು <u>ಅನುಬಂಧ-1</u> ರಲ್ಲಿ ಒದಗಿಸಲಾಗಿದೆ. |
| ಆ) | ಎಷ್ಟು ಕೆರೆಗಳಲ್ಲಿ / ಡ್ಯಾಂ / ಕಟ್ಟೆಗಳಲ್ಲಿ ಮೀನು ಸಾಕಾಣಿಕೆಗಾಗಿ ಟೆಂಡರ್ ಕರೆಯಲಾಗಿದೆ. (ಜಿಲ್ಲಾವಾರು ವಿವರ ನೀಡುವುದು) | ಮೀನು ಸಾಕಾಣಿಕೆಗಾಗಿ ಜಿಲ್ಲಾವಾರು ಟೆಂಡರ್ ಕರೆಯಲಾದ ಕೆರೆಗಳ / ಡ್ಯಾಂ / ಕಟ್ಟೆಗಳ ಮಾಹಿತಿಗಳನ್ನು <u>ಅನುಬಂಧ-2</u> ರಲ್ಲಿ ಒದಗಿಸಲಾಗಿದೆ. |
| ಇ) | ಕಳೆದ ಮೂರು ವರ್ಷಗಳಲ್ಲಿ ಮೀನು ಸಾಕಾಣಿಕೆಗಾಗಿ ಸರ್ಕಾರದಿಂದ ಯಾವ ಯೋಜನೆಗಳಿಗೆ ಎಷ್ಟೆಷ್ಟು ಅನುದಾನ ನೀಡಲಾಗಿದೆ; (ಜಿಲ್ಲಾವಾರು ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಮೀನು ಸಾಕಾಣಿಕೆಗಾಗಿ ನೀಡಲಾದ ಅನುದಾನದ ಜಿಲ್ಲಾವಾರು ಮಾಹಿತಿಗಳನ್ನು <u>ಅನುಬಂಧ-3</u> ರಲ್ಲಿ ಒದಗಿಸಲಾಗಿದೆ. |

ಸಂಖ್ಯೆ: ಪಸಂಮೀ ಇ-161 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

## ಅನುಬಂಧ-1

### ಕಳೆದ 3 ವರ್ಷಗಳಲ್ಲಿ ಕೆರೆಗಳು/ಡ್ಯಾಂ/ಕಟ್ಟೆಗಳಲ್ಲಿ ಮೀನು ಸಾಕಾಣಿಕೆಗಾಗಿ ನೀಡಿರುವ ಅನುದಾನ ವಿವರಗಳು

**ಕೊಡಗು ಜಿಲ್ಲೆ**

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 0 | 0 | 0 | 0 | 0 | 0 | 0.32 | 0.32 | 0.32 |
| 2 | ಮೀನು ಮರಿ ಖರೀದಿಸಲು ನೆರವು | 0.51 | 0.54 | 0.54 | 0.3 | 0.3 | 0.3 | 0.53 | 0.53 | 0.53 |
| 3 | ಮತ್ಸ್ಯಕೃಷಿ ಆಶಾಕಿರಣ | 0.81 | 0.81 | 0.77 | 0.55 | 0.55 | 0.55 | 0.56 | 0.56 | 0.56 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 21.8 | 21.8 | 21.67 | 33.29 | 33.29 | 33.17 | 5 | 5 | 4.32 |

**ಮಂಡ್ಯ ಜಿಲ್ಲೆ**

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ (ಮತ್ಸ್ಯಕೃಷಿ ಆಶಾಕಿರಣ) | 33.89 | 33.89 | 33.89 | 6.28 | 6.28 | 6.28 | 19.79 | 19.79 | 19.79 |
| 2 | ಮೀನುಮರಿ ಖರೀದಿಗೆ ಸಹಾಯಧನ | 2.65 | 2.65 | 2.65 | 0.1 | 0.1 | 0.1 | 0.85 | 0.85 | 0.85 |
| 3 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | - | - | - | - | - | - | 17.7 | 17.7 | 17.7 |
| 4 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 26.96 | 26.96 | 26.96 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 25 | 25 | 25 | 25 | 25 | 24.92 | 30 | 30 | 21.39 |

**ಚಾಮರಾಜನಗರ ಜಿಲ್ಲೆ**

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಮೀನು ಮರಿ ಖರೀದಿಸಲು ನೆರವು | 1.11 | 1.11 | 1.11 | 0 | 0 | 0 | 2.03 | 2.03 | 2.03 |
| 2 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 14.04 | 14.04 | 14.04 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 1 | 1 | 1 | 2 | 2 | 2 | 2 | 2 | 2 |

**ಮೈಸೂರು ಜಿಲ್ಲೆ**

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ ಮತ್ಸ್ಯ ಕೃಷಿ ಆಶಾಕಿರಣ | 7.16 | 7.16 | 7.16 | 6.46 | 6.46 | 6.46 | 13.5 | 13.5 | 13.5 |
| 2 | ಮೀನು ಮರಿ ಖರೀದಿಸಲು ನೆರವು | 3.13 | 3.16 | 3.16 | 0.47 | 0.47 | 0.47 | 3.86 | 3.86 | 3.86 |
| 3 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 2.69 | 2.69 | 2.69 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 30.3 | 28.59 | 28.59 | 30 | 30 | 29.98 | 30.86 | 30.86 | 29.82 |

**ಹಾಸನ ಜಿಲ್ಲೆ**

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 6.16 | 6.16 | 6.16 | 3.7 | 3.7 | 3.7 | 5.04 | 5.04 | 5.04 |
| 2 | ಮೀನು ಮರಿ ಖರೀದಿಸಲು ನೆರವು | 1.47 | 1.47 | 1.47 | 0.71 | 0.71 | 0.71 | 0.39 | 0.39 | 0.39 |
| 3 | ಜಲಾಶಯಗಳಲ್ಲಿ ಮೀನು ಮರಿ ಬಿತ್ತನೆ | 1.76 | 1.76 | 1.76 | 9.76 | 9.76 | 9.76 | 14.9 | 14.9 | 14.9 |
| 4 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 15.17 | 15.17 | 15.17 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 13.18 | 13.18 | 13.34 | 8.91 | 8.91 | 9.75 | 21 | 21 | 17.52 |

**ಶಿವಮೊಗ್ಗ ಜಿಲ್ಲೆ**

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 4.67 | 4.67 | 4.67 | 8.52 | 8.52 | 8.52 | 15.08 | 15.08 | 15.08 |
| 2 | ಮೀನು ಮರಿ ಖರೀದಿಸಲು ನೆರವು | 5.14 | 5.14 | 5.14 | 1.67 | 1.67 | 1.67 | 15.16 | 15.16 | 15.16 |
| 3 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | 15.12 | 15.12 | 15.05 | 2.65 | 2.65 | 2.65 | 31.21 | 31.21 | 31.21 |

2

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| 4 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 5.9 | 5.9 | 5.9 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 15.27 | 15.27 | 15.27 | 12.88 | 12.88 | 12.88 | 12.97 | 12.97 | 12.97 |
| | **ದಾವಣಗೆರೆ ಜಿಲ್ಲೆ** | | | | | | | | | |
| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಮೀನು ಮರಿ ಖರೀದಿಸಲು ನೆರವು | 1.48 | 2.31 | 2.31 | 1.2 | 1.2 | 1.2 | 1.72 | 1.72 | 1.72 |
| 2 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | 0 | 0 | 0 | 0 | 0 | 0 | 4.52 | 4.52 | 4.52 |
| 3 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 15.96 | 15.96 | 15.96 |
| 4 | ಮತ್ಸ್ಯಕೃಷಿ ಆಶಾ ಕಿರಣ ಯೋಜನೆ | 6.03 | 6.03 | 6.03 | 0.8 | 0.8 | 0.8 | 5.93 | 5.93 | 5.93 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 28 | 28 | 27.96 | 20 | 20 | 19.98 | 18 | 18 | 17.14 |
| ಅ | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 2 | 2 | 2 | 6 | 6 | 6 | 5 | 5 | 5 |
| ಕ | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 0 | 0 | 0 | 4 | 4 | 4 | 3 | 3 | 3 |
| | **ಚಿಕ್ಕಮಗಳೂರು ಜಿಲ್ಲೆ** | | | | | | | | | |
| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಮೀನು ಮರಿ ಖರೀದಿಸಲು ನೆರವು | 0.76 | 1 | 0.99 | 1.11 | 1.11 | 1.11 | 0.7 | 0.7 | 0.7 |
| 2 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | 2.1 | 2.1 | 0 | 0 | 0 | 0 | 15.15 | 15.15 | 15.15 |
| 3 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 8.5 | 8.5 | 8.5 |
| 4 | ಮತ್ಸ್ಯಕೃಷಿ ಆಶಾಕಿರಣ | 1.85 | 2.27 | 2.27 | 5.09 | 5.09 | 5.09 | 3.16 | 3.16 | 3.16 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 8.47 | 8.47 | 1.13 | 20.51 | 20.51 | 20.5 | 29 | 29 | 28.9 |
| | **ಚಿತ್ರದುರ್ಗ ಜಿಲ್ಲೆ** | | | | | | | | | |
| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 0 | 0 | 0 | 0 | 0 | 0 | 0 | 0 | 0 |
| 2 | ಮೀನು ಮರಿ ಖರೀದಿಸಲು ನೆರವು | 0.31 | C.64 | 0.64 | 0.05 | 0.05 | 0.05 | 0.83 | 0.83 | 0.83 |
| 3 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | 0 | 0 | 0 | 0 | 0 | 0 | 12.14 | 12.14 | 12.14 |
| 4 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 2.89 | 2.89 | 2.89 |
| 5 | ಮತ್ಸ್ಯಕೃಷಿ ಆಶಾ ಕಿರಣ ಯೋಜನೆ | 2.5 | 2.5 | 2.5 | 6.45 | 6.45 | 6.45 | 0.5 | 0.5 | 0.5 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 10.12 | 10 12 | 10.12 | 10.51 | 10.51 | 10.51 | 10.19 | 10.19 | 10.19 |
| | **ದಕ್ಷಿಣ ಕನ್ನಡ** | | | | | | | | | |
| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 1.2 | 1.2 | 1.17 | 3.54 | 3.54 | 3.46 | 7.5 | 7.5 | 0 |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 3 | 3 | 2 | 7 | 7 | 6.82 | 11 | 11 | 3.71 |
| | **ಉಡುಪಿ** | | | | | | | | | |
| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| | **ಜಿಲ್ಲಾ ಪಂಚಾಯತ್ ಯೋಜನೆಗಳು** | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ (ಎಸ್.ಸಿ.ಪಿ/ಟಿ.ಎಸ್.ಪಿ) | 2.8 | 2.8 | 2.78 | 2.8 | 2.8 | 2.76 | 2.8 | 2 | 2 |
| | **ಉತ್ತರಕನ್ನಡ** | | | | | | | | | |
| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ 2405-00-101-0-03 | | | | | | | | | |
| ಎ | ಸ್ವಂತ ಕೊಳಗಳಲ್ಲಿ ಸಿಹಿ ನೀರು/ ಸಮುದ್ರ ಸೀಗಡಿ ಕೃಷಿಗೆ ಸಹಾಯ | 0 | 0 | 0 | 0 | 0 | 0 | 0 | 0 | 7.34 |

3

| | | | | | | | | | | |
|---|---|---|---|---|---|---|---|---|---|---|
| | ಮೀನು ಮರಿ ಖರೀದಿಸಲು ನೆರವು 2405-00-101-0-28 | 2.9 | 2.9 | 2.9 | 7.12 | 7.12 | 7.12 | 2.87 | 2.85 | 2.06 |
| 2 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ 2405-00-101-0-54 | 2.2 | 2.2 | 2.2 | 0.16 | 0.16 | 0.16 | 1.36 | 1.36 | 1.36 |
| | ಜಿಲ್ಲಾ ಪಂಚಾಯತ್ ಯೋಜನೆಗಳು | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 2.28 | 2.28 | 2.28 | 5.4 | 5.4 | 2.37 | 11.92 | 11.71 | 8.47 |

## ಬೆಂಗಳೂರು ನಗರ

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 13.39 | 13.39 | 13.39 | 3.41 | 3.41 | 3.41 | 3.95 | 3.95 | 3.95 |
| 2 | ಮೀನುಮರಿ ಖರೀದಿಸಲು ನೆರವು | 0.68 | 0.68 | 0.68 | 0 | 0 | 0 | 0.31 | 0.31 | 0.3 |
| 3 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 7.72 | 7.72 | 7.72 |
| 4 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | | | | 2.24 | 2.24 | 2.24 | 0.84 | 0.84 | 0.84 |
| | ಜಿಲ್ಲಾ ಪಂಚಾಯತ್ ಯೋಜನೆಗಳು | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 4.22 | 4.22 | 4.22 | 4.98 | 4.98 | 4.98 | 4.66 | 4.66 | 4.66 |

## ಬೆಂಗಳೂರು ಗ್ರಾಮಾಂತರ

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಮೀನು ಮರಿ ಖರೀದಿಸಲು ನೆರವು | 0.2 | 0.2 | 0.19 | 0.2 | 0.2 | 0.2 | 0.54 | 0.54 | 0.54 |
| 2 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 1.82 | 1.82 | 1.82 |
| | ಜಿಲ್ಲಾ ಪಂಚಾಯತ್ ಯೋಜನೆಗಳು | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 1.8 | 1.8 | 1.8 | 1.8 | 1.8 | 1.8 | 1.8 | 1.8 | 1.8 |

## ತುಮಕೂರು

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಮೀನುಮರಿ ಖರೀದಿಸಲು ನೆರವು | 0 | 1.4 | 1.4 | 0 | 0.2 | 0.2 | 1.01 | 1.01 | 1.01 |
| 2 | ಮತ್ಸ್ಯ ಕೃಷಿ ಆಶಾಕಿರಣ | 0 | 0 | 42.6 | 0 | 0 | 4.75 | 36.28 | 36.28 | 36.28 |
| 3 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | 0 | 3.13 | 3.13 | 0 | 0.69 | 0.69 | 1.7 | 1.7 | 1.7 |
| 4 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 10.74 | 10.74 | 10.74 |
| | ಜಿಲ್ಲಾ ಪಂಚಾಯತ್ ಯೋಜನೆಗಳು | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 0 | 15 | 14.55 | 0 | 18 | 17.89 | 0 | 25.02 | 20.28 |

## ಚಿಕ್ಕಬಳ್ಳಾಪುರ

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 40.01 | 40.01 | 40.01 | 2.38 | 2.38 | 2.38 | 1.6 | 1.6 | 1.6 |
| 2 | ಮೀನು ಮರಿ ಖರೀದಿಸಲು ನೆರವು | 0.9 | 0.9 | 0.89 | 0.48 | 0.48 | 0.47 | 1.32 | 1.32 | 1.32 |
| 3 | ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | 0 | 0 | 0 | 0 | 0 | 0 | 0 | 0 | 0 |
| 4 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 1.18 | 1.18 | 1.18 |
| | ಜಿಲ್ಲಾ ಪಂಚಾಯತ್ ಯೋಜನೆಗಳು | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 4.7 | 4.7 | 4.7 | 4.7 | 4.7 | 4.7 | 4.7 | 4.7 | 4.7 |

## ಕೋಲಾರ

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 89.74 | 89.74 | 89.74 | 14.64 | 14.64 | 14.64 | 23.41 | 23.41 | 11.66 |
| 2 | ಮೀನು ಮರಿ ಖರೀದಿಸಲು ನೆರವು | 0.56 | 0.56 | 0.56 | 0.22 | 0.21 | 0.21 | 0.35 | 0.35 | 0.2 |
| | ಜಿಲ್ಲಾ ಪಂಚಾಯತ್ ಯೋಜನೆಗಳು | | | | | | | | | |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 5 | 5 | 5 | 6 | 6 | 6 | 10 | 10 | 10 |

## ರಾಮನಗರ

| ಕ್ರ. ಸಂ | ಯೋಜನೆಯ ಹೆಸರು | 2017-18 | | | 2018-19 | | | 2019-20 | | |
|---|---|---|---|---|---|---|---|---|---|---|
| | | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ | ಅನುದಾನ | ಬಿಡುಗಡೆ | ವೆಚ್ಚ |
| 1 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 0 | 0 | 0 | 0 | 0 | 0 | 11.3 | 11.3 | 11.3 |
| 2 | ಮೀನು ಮರಿ ಖರೀದಿಸಲು ನೆರವು | 0 | 0 | 0 | 0 | 0 | 0 | 1.39 | 1.39 | 1.39 |
| 3 | ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ | 0 | 0 | 0 | 0 | 0 | 0 | 10.34 | 10.34 | 10.34 |

